ಅವಧೂತ ಶಿರೋಮಣಿ

# ಶ್ರೀವಿಷ್ಣುತೀರ್ಥರು



ಲೇಖಕರು :

ಪಂ. ಶ್ರೀಕರಾಚಾರ್ಯ ಅಡವಿ

ಕೂಸನೂರು

ಪ್ರಕಾಶಕರು :

ಶ್ರೀ ವ್ಯಾಸತತ್ತ್ವಜ್ಞ ಪ್ರತಿಷ್ಠಾನ,

ಮಾದಿನೂರು

**ಅವಧೂತ ಶಿರೋಮಣಿ ಶ್ರೀ ವಿಷ್ಣುತೀರ್ಥರು**


| | | |
|---|---|---|
| ಮೊದಲ ಮುದ್ರಣ | : | 2012 |
| ಎರಡನೇ ಮುದ್ರಣ | : | 2018 |
| ಪ್ರತಿಗಳು | : | 1000 |
| ಪುಟಗಳು | : | lxiv + 152 |
| ಬೆಲೆ | : | ರೂ.100/- |
| ಲೇಖಕರು | : | ಪಂ. ಶ್ರೀಕರಾಚಾರ್ಯ ಅಡವಿ<br>ಕೂಸನೂರು |
| ಪ್ರಕಾಶಕರು | : | ಶ್ರೀ ವ್ಯಾಸತತ್ವಜ್ಞ ಪ್ರತಿಷ್ಠಾನ, ಮಾದಿನೂರು |




---

ಮುದ್ರಣ : ವಾಗರ್ಥ, ಬೆಂಗಳೂರು-560 019. ಇ-ಮೇಲ್. vagartha@yahoo.com

# ಅನುಕ್ರಮಣಿಕೆ

## ಪರಿಶಿಷ್ಟ

ಜಗದ್ಗುರು ಶ್ರೀಮನ್ ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ ಅಭಿನವರಘೂತ್ತಮತೀರ್ಥ

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ**

# ಅನುಗ್ರಹ ಸಂದೇಶ



''ಮಂಚ ಬಾರದು ಮಡದಿ ಬಾರಳು ಕಂಚು ಕನ್ನಡಿ ಬಾರದು'' ಎಂಬ ದಾಸರ ನುಡಿಯನ್ನು ಕೇಳುತ್ತಿದ್ದಂತೆಯೇ ಪರಮ ವಿರಕ್ತರಾಗಿ ಸನ್ಯಾಸವನ್ನು ತೆಗೆದುಕೊಂಡ ಮಹಾನುಭಾವರಾದ ಶ್ರೀಮನ್ಯಾಯಸುಧಾ ಗ್ರಂಥಕ್ಕೆ ''ರಸರಂಜನೀ'' ಎಂಬ ವ್ಯಾಖ್ಯಾನವನ್ನು ರಚಿಸಿದ ಮಹಾಜ್ಞಾನಿಗಳಾದ ಶ್ರೀರಮಾಸ್ತೋತ್ರವನ್ನು ರಚಿಸುವ ಮೂಲಕ ಹಾಗೂ ಶ್ರೀಮನ್ನ್ಯಾಯಸುಧಾ ಪಾಠಪ್ರವಚನದ ಮೂಲಕ ಬರಗಾಲದಲ್ಲಿ ಸುಭಿಕ್ಷೆಯನ್ನು ಮಾಡಿಸಿದ ಸಿದ್ಧ ಪುರುಷರಾದ ಶ್ರೀಮದ್ಭಾಗವತ ಸಾರೋದ್ಧಾರ, ಷೋಡಶಿ ಹಾಗೂ ಚತುರ್ದಶಿ ಇತ್ಯಾದಿ ಗ್ರಂಥಗಳನ್ನು ರಚಿಸಿ ಸಾಧಕರಿಗೆ ಪರಮೋಪಕಾರ ಮಾಡಿದ ಶ್ರೀ ವಿಷ್ಣುತೀರ್ಥರ ಚರಿತ್ರೆಯನ್ನು ಸುಂದರವಾಗಿ ನಮ್ಮ ಶಿಷ್ಯರಾದ ಪಂ. ಶ್ರೀಕರಾಚಾರ್ಯ ಅಡವಿ ಅವರು ಬರೆದಿದ್ದಾರೆ. ಇವರಿಗೆ ನಮ್ಮ ಉಪಾಸ್ಯ ಮೂರ್ತಿಗಳಾದ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸದೇವರು ಜ್ಞಾನಾದಿಗಳನ್ನು ಕೊಟ್ಟು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಮುಕ್ಕಾಂ : ಧಾರವಾಡ

ಶ್ರೀ ಶ್ರೀ ಸತ್ಯಾತ್ಮತೀರ್ಥರು,
ಉತ್ತರಾದಿಮಠ

ಶ್ರೀ ಲಕ್ಷ್ಮೀವೇಂಕಟೇಶಾಯ ನಮಃ
ಶ್ರೀಮಧ್ವದೇವತಾಗುರುಭ್ಯೋ ನಮಃ

ಪ್ರಾತಃಸ್ಮರಣೀಯರಾದ ಶ್ರೀವಿಷ್ಣುತೀರ್ಥರು ಮಹಾಜ್ಞಾನಿಗಳು. ಪರಮವಿರಕ್ತರು. ಉತ್ತಮಗ್ರಂಥಕಾರರು. ಅವರು ತಮ್ಮ ಜೀವನವನ್ನು ಭಗವಂತನ ಸೇವೆಗಾಗಿ ಮೀಸಲಿಟ್ಟವರು. ಇಡಿಯ ಜೀವನವನ್ನು ಹೇಗೆ ಸಾಧನಾಮಯವಾಗಿ ಮಾಡಬಹುದೆಂದು ಸಾಮಾನ್ಯರಿಗೂ ತೋರಿಕೊಟ್ಟವರು. ಶ್ರೀಮದ್‌ಭಾಗವತವನ್ನು ಜೀವನಕ್ಕೆ ಅಳವಡಿಸುವಂತೆ ಬೋಧಿಸಿದವರು.

ಶ್ರೀಸಾಮಾನ್ಯರಿಗೂ ಅವರ ವಚನಗಳು ಬೋಧಪ್ರದವಾಗಿವೆ. ಪ್ರೇರಣಾಸ್ಪದವಾಗಿವೆ. ಪ್ರಾಯೋಗಿಕವಾಗಿ ಶ್ರೀಭಾಗವತಧರ್ಮವನ್ನು ಅನುಷ್ಠಾನ ಮಾಡುವ ಕ್ರಮವನ್ನು ಉಪದೇಶಿಸಿದ್ದಾರೆ. ಮಾನವನ ಮನಸ್ಸಿನ ಏಕಾಂತವಾದ ಮೂಲೆ ಮೂಲೆಗಳಲಿ ಬಿದ್ದು ಕೊಳೆಯುತ್ತಿರುವ ಕೊಳಚೆಯನ್ನು ಗುರುತಿಸುವ ಮತ್ತು ಅದನ್ನು ಕಳೆದುಕೊಳ್ಳುವ ಮಾರ್ಗವನ್ನು ಹೇಳಿದ್ದಾರೆ.

ಶ್ರೀಭಾಗವತಧರ್ಮಗಳು ಇಂದಿನ ಜೀವನದಲ್ಲಿ ಹೇಗೆ ಪ್ರಸ್ತುತ ಎನ್ನುವುದನ್ನು ಹಾಗೂ ಅದರ ಆವಶ್ಯಕತೆ ಅನಿವಾರ್ಯತೆಗಳನ್ನು ಹಾಗೂ ಅವುಗಳಿಂದಾಗುವ ಮಹಾಲಾಭವನ್ನು ತುಂಬ ಸುಂದರವಾಗಿ ನಿರೂಪಿಸಿದ್ದಾರೆ.

ಶ್ರೀಮತ್ ಟೀಕಾಕೃತ್ಪಾದರ ಮನೋವಿಶ್ಲೇಷಣೆಯ ಅನೇಕ ಮುಖವನ್ನು ಬಳಸಿ ಭಕ್ತರಿಗೆ ಸಾಧನೆಗೆ ದಿಟ್ಟಮಾರ್ಗವನ್ನು ತೆರೆದಿಟ್ಟಿದ್ದಾರೆ. ವಿಶೇಷವಾಗಿ ಬಿಂಬನ ಸ್ವರೂಪ, ಬಿಂಬನ ಪೂಜೆ ಅವನಿಗೆ ಸಮರ್ಪಣಾಕ್ರಮ, ಅವನಿಂದಾದ ಉಪಕಾರ ಅನುಗ್ರಹ ಇವುಗಳನ್ನು ಬಿಡಿಬಿಡಿಯಾಗಿ ನಿರೂಪಿಸಿ ಸಾಧನೆಯ ಎಲ್ಲ ಸಿದ್ಧತೆಗಳನ್ನು ಒದಗಿಸಿದ್ದಾರೆ. ವೈರಾಗ್ಯದ ಮೆಟ್ಟಿಲುಗಳನ್ನು ತೋರಿಸಿ ವ್ಯಕ್ತಿಯನ್ನು ಸಾಧನೆಯ ಕುರಿತು ನಿರಾಶೆಯಿಂದ ಹೊರತೆಗೆದು ದಾರಿಗೆ ಬರುವಂತೆ ಮಾಡಿದ್ದಾರೆ.

ಇಂಥೆಲ್ಲ ಉಪಕಾರದ ಹೊರೆಯನ್ನೇ ಹೊರೆಸಿದ ಮಹಾನುಭಾವರ ಸ್ಮರಣ, ನಮನ, ಪೂಜನ ಆಜ್ಞಾಪರಿಪಾಲನಗಳು ಮಾನವನ ಉನ್ನತಿಗೆ - ಮುಕ್ತಿಗೆ ಸೋಪಾನ.

ಅಂಥವರ ಅನೇಕ ಕೃತಿಗಳನ್ನು - ಮಹಾಸೌಭಾಗ್ಯದಿಂದ ಅವರ ವಂಶದವನೇ ಆದ ನಮ್ಮ ಪ್ರೀತಿಯ ಶಿಷ್ಯನಾದ ಪಂಡಿತ. ಚಿ. ಅಡವಿ ಶ್ರೀಕರಾಚಾರ್ಯನು ಸಂಕಲನ ಮಾಡಿ ಹೊರತಂದಿದ್ದಾನೆ. ದೇವರು ಗುರುಗಳು ಅವನಿಗೆ ನಿರಂತರ ಆಯುರಾರೋಗ್ಯ ಸಂಪತ್ತು ಕೀರ್ತಿಗಳನ್ನು - ವಿಶೇಷವಾಗಿ ಜ್ಞಾನಭಕ್ತಿವೈರಾಗ್ಯಗಳನ್ನು ಕೊಟ್ಟು ದಯಪಾಲಿಸಲಿ ಎಂದು ಅನನ್ಯವಾಗಿ ಪ್ರಾರ್ಥಿಸುತ್ತೇನೆ.

ಪರಮಪೂಜ್ಯ ಮಾಹುಲೀಗೋಪಾಲಾಚಾರ್ಯ ಪಾದಪದ್ಮಾರಾಧಕ,
ಬ್ರಹ್ಮಾತ್ಮದಾಸ, ಪಂ. ಮಾಹುಲೀ ವಿದ್ಯಾಸಿಂಹಾಚಾರ್ಯ

॥ ವಿಷ್ಣುತೀರ್ಥ ಗುರುರಾಜೋ ವಿಜಯತೇ ॥

# ಪ್ರಕಾಶಕರ ನುಡಿ

ಶ್ರೀ ವಿಷ್ಣುತೀರ್ಥರು ವಿರಕ್ತ ಶಿಖಾಮಣಿಗಳು, ಜ್ಞಾನಿವರೇಣ್ಯರು, ಸಜ್ಜನರ ಉದ್ಧಾರಕ್ಕಾಗಿಯೇ ಭುವಿಗಿಳಿದ ದೇವತೆಗಳು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಎಂಬ ನಾಲ್ಕು ಆಶ್ರಮಗಳನ್ನು ಅತ್ಯಂತ ಉನ್ನತ ರೀತಿಯಲ್ಲಿ ಆಚರಿಸಿ ಈ ಪ್ರಪಂಚಕ್ಕೆ ಆದರ್ಶವೆನಿಸಿದವರು. ಜಯತೀರ್ಥರ ಶಿಷ್ಯರಾದ ಇವರು ಅವರ ಆಜ್ಞೆಯಂತೆಯೇ ಭೂಮಿಯಲ್ಲಿ ಅವತರಿಸಿ ಜಯತೀರ್ಥರ ಗ್ರಂಥಗಳ ಮಹಿಮೆಯನ್ನು ಸಜ್ಜನ ಸಮುದಾಯಕ್ಕೆ ತಿಳಿಸಿಕೊಟ್ಟ ಮಹನೀಯರು. ಇವರ ಸ್ಮರಣೆ ಮೂರುವರೆ ಕೋಟಿ ತೀರ್ಥಗಳಲ್ಲಿ ಮಾಡಿದ ಸ್ನಾನಕ್ಕಿಂತಲೂ ಮಿಗಿಲಾದುದು ಎಂದು ಅವರ ಪೂರ್ವಾಶ್ರಮ ಪುತ್ರರಾದ ಕೃಷ್ಣಾರ್ಯರು ಇವರನ್ನು ಸ್ತುತಿಸಿದ್ದಾರೆ. ಸಜ್ಜನರ ಉದ್ಧಾರಕ್ಕಾಗಿ ಅನೇಕ ಗ್ರಂಥಗಳನ್ನು ರಚಿಸಿದ ಇವರ ಗ್ರಂಥಗಳ ಪ್ರಕಾಶನಕ್ಕಾಗಿಯೇ ಮೀಸಲಾದ ಸಂಸ್ಥೆ ಶ್ರೀ ವ್ಯಾಸತತ್ತ್ವಜ್ಞ ಪ್ರತಿಷ್ಠಾನ. ಕಳೆದ ಅನೇಕ ವರ್ಷಗಳಲ್ಲಿ ವಿಷ್ಣುತೀರ್ಥರ ಅನೇಕ ಗ್ರಂಥಗಳನ್ನು ಪ್ರಕಾಶನಪಡಿಸಿದೆ.

ಪ್ರಕೃತ ಹುಬ್ಬಳ್ಳಿಯಲ್ಲಿ ಭವ್ಯವಾದ ಶ್ರೀ ವಿಷ್ಣುತೀರ್ಥ ವಿದ್ಯಾಪೀಠ, ಶ್ರೀ ವೆಂಕಟೇಶ್ವರ ದೇವಸ್ಥಾನ ಹಾಗೂ ಶ್ರೀ ಜಯತೀರ್ಥರ ಮೃತ್ತಿಕಾ ವೃಂದಾವನಗಳ ಸ್ಥಾಪನೆಯನ್ನು ಮಾಡಿದೆ. ಪ್ರತಿಷ್ಠಾನದಿಂದ ಪ್ರಕಾಶಿತವಾದ ಎಲ್ಲ ಗ್ರಂಥಗಳ ಪ್ರತಿಗಳೂ ಮುಗಿದಿದ್ದು ಅನುಪಲಬ್ಧವಾಗಿವೆ. ವಿಷ್ಣುತೀರ್ಥರ ಸಮಸ್ತ ಗ್ರಂಥಗಳನ್ನು ಸೇವಾ ರೂಪದಲ್ಲಿ ಪುನಃ ಮುದ್ರಿಸಿ ಜಿಜ್ಞಾಸುಗಳಿಗೆ ತಲುಪಿಸಲು ಓರ್ವ ವಿಷ್ಣುತೀರ್ಥರ ಭಕ್ತರು ಮುಂದಾಗಿದ್ದಾರೆ. ಅವರ ಸೇವಾ ರೂಪವಾಗಿಯೇ ಈ ಎಲ್ಲ ಗ್ರಂಥಗಳು ಮತ್ತೊಮ್ಮೆ ಮುದ್ರಿತವಾಗುತ್ತಿವೆ. ಸಾವಿರ ಪುಟಗಳಿಗಿಂತಲೂ ದೊಡ್ಡದಾದ ಈ ಗ್ರಂಥ ಮಾಲಿಕೆಯನ್ನು ಮುದ್ರಿಸುತ್ತಿರುವ ಅವರ ಸಾಹಸ ಅಭಿನಂದನೀಯ. ಅವರೋರ್ವ ಪ್ರಚಾರವಿಮುಖರಾದ ದಾನಿಗಳು. ಎಲ್ಲಿಯೂ ತಮ್ಮ ಹೆಸರನ್ನು ಮುದ್ರಿಸಲು ಒಪ್ಪಲಿಲ್ಲ. ಬಹಳ ಒತ್ತಾಯಪೂರ್ವಕವಾಗಿ ನಾವೇ ಅವರ ತಂದೆ ತಾಯಿಗಳ ಹೆಸರನ್ನು ಮುದ್ರಿಸಿದ್ದೇವೆ. ಸ್ವಯಂ ಪ್ರೇರಣೆಯಿಂದ ಮುಂದೆ ಬಂದು ಶ್ರಮಸಾಧ್ಯವಾದ ಈ ಸೇವೆಯನ್ನು ಸಲ್ಲಿಸಿದ ಅವರಿಗೂ ಅವರ ಪರಿವಾರಕ್ಕೂ ಮತ್ತು ಮುದ್ರಣ ಕಾರ್ಯದಲ್ಲಿ ಸಹಕರಿಸಿದ ಎಲ್ಲರಿಗೂ ಶ್ರೀ ವಿಷ್ಣುತೀರ್ಥರು ಅವರ ಅಂತರ್ಯಾಮಿಯಾದ ಪರಮಾತ್ಮನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತಿದ್ದೇವೆ.

13-2-2018<br>ಶ್ರೀ ವಿಷ್ಣುತೀರ್ಥರ ಆರಾಧನೆ

**ಶ್ರೀ ಶ್ರೀಕರಾಚಾರ್ಯ ಅಡವಿ**<br>ಅಧ್ಯಕ್ಷರು<br>ಶ್ರೀ ವ್ಯಾಸತತ್ತ್ವಜ್ಞ ಪ್ರತಿಷ್ಠಾನ, ಮಾದಿನೂರು.

# ಶುಭಾಶಂಸನೆ

ಬೆಂಗಳೂರಿನ ನಿವಾಸಿಗಳಾದ

**ಶ್ರೀ ಡಿ.ವಿ. ಶ್ರೀಧರ** ಮತ್ತು ಕುಟುಂಬದವರು

ತಮ್ಮ ತಂದೆಯವರಾದ

**ದಿ. ದೊಡ್ಡಬಳ್ಳಾಪುರ ಶ್ರೀ ವೆಂಕಟಸುಬ್ಬರಾಯರು**

ಹಾಗೂ ತಾಯಿ

**ದಿ. ಶ್ರೀಮತಿ ಕೃಷ್ಣವೇಣಮ್ಮ**

ಇವರ ಸ್ಮರಣಾರ್ಥವಾಗಿ

ಶ್ರೀ ವಿಷ್ಣುತೀರ್ಥರ ಚರಿತ್ರೆಯ ಈ ಗ್ರಂಥದ ಪ್ರಕಾಶನಕ್ಕೆ ಭಾಗಶಃ ಸೇವೆ ಸಲ್ಲಿಸಿದ್ದಾರೆ. ಶ್ರೀ ವಿಷ್ಣುತೀರ್ಥರು ಅವರ ಅಂತರ್ಯಾಮಿಯಾದ ಸಕಲ ಸ್ವರ, ಸಕಲ ವ್ಯಂಜನಗಳಿಂದ ಪ್ರತಿಪಾದ್ಯನಾದ ಅಕ್ಷರನಾಮಕ ಭಗವಂತನು ಅವರಿಗೂ ಅವರ ಪರಿವಾರಕ್ಕೂ ವಿಶೇಷವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀ ವ್ಯಾಸತತ್ತ್ವಜ್ಞ ಪ್ರತಿಷ್ಠಾನ, ಮಾದಿನೂರು.

# ಶುಭಾಶಂಸನೆ

## ಶ್ರೀ ಕೃಷ್ಣಸ್ವಾಮಿರಾವ್ ಬೋರೆ ಹಾಗೂ
## ಇಂದಿರಾಬಾಯಿ

ಅವರ ಸ್ಮರಣಾರ್ಥವಾಗಿ
ಅವರ ಮಕ್ಕಳು ಶ್ರೀ ವಿಷ್ಣುತೀರ್ಥರ ಸಮಗ್ರ
ಪ್ರಕಟಿತ ಗ್ರಂಥಗಳನ್ನು ಪುನಃ ಮುದ್ರಿಸಿ ಜಿಜ್ಞಾಸುಗಳಿಗೆ
ತಲುಪಿಸುವ ಮಹಾನ್ ಸೇವೆಯನ್ನು ಸಲ್ಲಿಸುತ್ತಿದ್ದಾರೆ.
ವಿಷ್ಣುತೀರ್ಥರು, ಜಯತೀರ್ಥರು,
ಶ್ರೀಮದಾನಂದತೀರ್ಥರು
ಹಾಗೂ
ಇವರೆಲ್ಲರ ಅಂತರ್ಯಾಮಿಯಾದ ಸಕಲ ಸ್ವರ,
ಸಕಲ ವ್ಯಂಜನಗಳಿಂದ ಪ್ರತಿಪಾದ್ಯನಾದ
ಅಕ್ಷರನಾಮಕ ಭಗವಂತನು ಅವರಿಗೂ ಅವರ ಪರಿವಾರಕ್ಕೂ
ವಿಶೇಷವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀ ವ್ಯಾಸತತ್ತ್ವಜ್ಞ ಪ್ರತಿಷ್ಠಾನ, ಮಾದಿನೂರು.



ವಿಷ್ಣುತೀರ್ಥರ ಉಪಾಸ್ಯಮೂರ್ತಿ ರುಕ್ಮಿಣಿ ಸತ್ಯಭಾಮಾ
ಸಮೇತ ಶ್ರೀ ಗೋಪಾಲಕೃಷ್ಣ ದೇವರು



ವಿಷ್ಣುತೀರ್ಥರ ಉಪಾಸ್ಯಮೂರ್ತಿ ಯೋಗಪಟ್ಟಕಾ ಶ್ರೀ ಲಕ್ಷ್ಮೀನರಸಿಂಹ ದೇವರು



ವಿಷ್ಣುತೀರ್ಥ ಕರಾರ್ಚಿತ
ಪಟ್ಟಾಭಿರಾಮ ದೇವರು



ವಿಷ್ಣುತೀರ್ಥ ಕರಾರ್ಚಿತ
ಲಕ್ಷ್ಮೀನಾರಾಯಣ ದೇವರು



ವಿಷ್ಣುತೀರ್ಥ ಕರಾರ್ಚಿತ
ನವನೀತಕೃಷ್ಣ ದೇವರು



ವಿಷ್ಣುತೀರ್ಥ ಕರಾರ್ಚಿತ ಸಾಲಿಗ್ರಾಮಗಳು



ವಿಷ್ಣುತೀರ್ಥರಿಗೆ ಒಲಿದು
ಚಕ್ರತೀರ್ಥದಲ್ಲಿ ಅಂಜಲಿಯಲ್ಲಿ
ಬಂದ ಯಂತ್ರೋದ್ಧಾರಕ
ಪ್ರಾಣದೇವರು



ವಿಷ್ಣುತೀರ್ಥರು ವೃಂದಾವನ
ಪ್ರವೇಶಾನಂತರ ಕೃಷ್ಣಾರ್ಯರಿಗೆ
ದರ್ಶನ ನೀಡಿದ ರೂಪ



ವಿಷ್ಣುತೀರ್ಥರು ಕೃಷ್ಣಾರ್ಯರಿಗೆ
ನೀಡಿದ ಮಂತ್ರಾಕ್ಷತೆ ಸಂಪುಟ





ವಿಷ್ಣುತೀರ್ಥರು ಉಪಯೋಗಿಸುತ್ತಿದ್ದ ಮುದ್ರಿಕೆಗಳು



ವಿಷ್ಣುತೀರ್ಥರಿಗೆ ಒಲಿದು
ಮುಖದಿಂದ ಪಂಚಾಮೃತ
ಹೊರಸೂಸಿದ
ವ್ಯಾಸತತ್ವಜ್ಞರಿಂದ
ಪ್ರತಿಷ್ಠಾಪಿತ
ವೇಣುಗೋಪಾಲಕೃಷ್ಣದೇವರು
ವೇಣಿಸೋಮಪುರ



ಷೋಡಶಬಾಹು ನರಸಿಂಹ ದೇವರು
ಹಾಗೂ ಅವತಾರ ತ್ರಯೋಪೇತ
ಮುಖ್ಯಪ್ರಾಣ ದೇವರು
ವೇಣಿಸೋಮಪುರ



ವಿಷ್ಣುತೀರ್ಥರು ಪ್ರತಿಷ್ಠಾಪಿಸಿದ ಲಕ್ಷ್ಮೀನರಸಿಂಹ ದೇವರು, ಮೊರಬ



ವಿಷ್ಣುತೀರ್ಥರು ಪ್ರತಿಷ್ಠಾಪಿಸಿದ
ಲಕ್ಷ್ಮೀನರಸಿಂಹ ದೇವರು, ಧಾರವಾಡ



ವಿಷ್ಣುತೀರ್ಥರು ಪ್ರತಿಷ್ಠಾಪಿಸಿದ
ಹನುಮಂತ ದೇವರು, ಧಾರವಾಡ



ವಿಷ್ಣುತೀರ್ಥರು ವಾನಪ್ರಸ್ಥ
ಆಚರಿಸಿದಾಗ ಪಾಠಪ್ರವಚನ
ಮಾಡುತ್ತಿದ್ದ ಅಶ್ವತ್ಥಕಟ್ಟೆ,
ಮುನವಳ್ಳಿ



ವಿಷ್ಣುತೀರ್ಥರು ಗುರುಕುಲದಲ್ಲಿದ್ದಾಗ ಗುರುಪುತ್ರನ ಅಪಮೃತ್ಯು ಪರಿಹಾರಕ್ಕಾಗಿ ಒಂದು ಸಪ್ತಾಹದವರೆಗೆ ಕುಳಿತು ನರಸಿಂಹ ಜಪ ಮಾಡಿದ ತುಂಗಭದ್ರೆಯ ನಡುಬಂಡೆ, ವೇಣಿಸೋಮಪುರ



ವಿಷ್ಣುತೀರ್ಥರು ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿ ನಿರಂತರ ಸೇವಿಸಿದ
ದ್ವೈತ ಸಿದ್ಧಾಂತದ ಪ್ರತಿಷ್ಠಾಪಕರು ಶ್ರೀ ಶ್ರೀಮದಾನಂದತೀರ್ಥ ಭಗವತ್ಪಾದರು



ವಿಷ್ಣುತೀರ್ಥರ ಅವತಾರಕ್ಕೆ ಆದೇಶ ನೀಡಿ ಅನುಗ್ರಹ ಮಾಡಿದ ಶ್ರೀಮತ್ ಟೀಕಾಕೃತ್ಪಾದರು



ವಿಷ್ಣುತೀರ್ಥರ ವಿದ್ಯಾಗುರುಗಳಾದ ವ್ಯಾಸತತ್ತ್ವಜ್ಞತೀರ್ಥರ ಮೂಲವೃಂದಾವನ
ವೇಣಿಸೋಮಪುರ

# ಶುಭಾಶೀರ್ವಾದ

ಶ್ರೀ ಶ್ರೀ 108 ವಿಷ್ಣುತೀರ್ಥರು ವೈರಾಗ್ಯದ ಉತ್ತುಂಗ ಶಿಖರಕ್ಕೇರಿ ತಮ್ಮ ಅಪಾರ ಸಂಪತ್ತನ್ನು ಸಂಪೂರ್ಣವಾಗಿ ದಾನ ಮಾಡಿ ವಾನಪ್ರಸ್ಥದ ನಿಯಮದಂತೆ 12 ವರ್ಷ ಅಡವಿಯಲ್ಲಿಯೇ ವಾಸ ಮಾಡಿ ಅಲ್ಲಿಯೇ ಮಧುಕರ ವೃತ್ತಿಯಿಂದ ಜೀವನ ಮತ್ತು ಪಾಠ, ಪ್ರವಚನ ಮಾಡಿ ಅಸಂಖ್ಯ ಶಿಷ್ಯ ವೃಂದವನ್ನು ತಯಾರು ಮಾಡಿ ಅಡವಿ ಆಚಾರ್ಯರೆಂದು ಪ್ರಖ್ಯಾತರಾದರು.

ಸನ್ಯಾಸ ಸ್ವೀಕರಾದ ನಂತರವೂ ಅವರನ್ನು ಅಡವಿ ಸ್ವಾಮಿಗಳು ಎಂದೇ ಜನರು ಮಾನ್ಯ ಮಾಡಿದರು. ಸನ್ಯಾಸ ಸ್ವೀಕರಿಸುವ ಮುನ್ನವೇ ಅವರು ಆಡಂಬರ ಜೀವನಕ್ಕೆ ಮೆಚ್ಚದೆ ಕಠಿಣವಾದ 'ಅವಧೂತ' ಮಾರ್ಗವಅನುಸರಿಸಿ ''ಅವಧೂತ ಶಿರೋಮಣಿ'' ಎಂದು ಪ್ರಖ್ಯಾತರಾದರು.

108 ಸಾರೆ ಶಿಷ್ಯರಿಗೆ ಶ್ರೀ ನ್ಯಾಯ ಸುಧಾ ಪಾಠ ಹೇಳಿ ಮಂಗಳ ಮಾಡಿ ಬೃಹತ್ ಪ್ರಮಾಣದ ಶಿಷ್ಯ ಸಮೂಹವನ್ನು ನಿರ್ಮಾಣ ಮಾಡಿದ ಮಹನೀಯರು. ಲೋಕ ಕಲ್ಯಾಣದ ಗುರಿಯನ್ನೇ ಮುಖ್ಯವಾಗಿ ಇಟ್ಟುಕೊಂಡ ಈ ಮಹನೀಯರು ಮುಂಬರುವ ಯಾಂತ್ರಿಕ ಯುಗದಲ್ಲಿ ಸಜ್ಜನ ಲೋಕಕ್ಕೆ ಉಪಯುಕ್ತವಾಗುವಂತೆ ''ಶ್ರೀ ಭಾಗವತ ಮಹಾಗ್ರಂಥದ'' ಸಾರವನ್ನೇ ಸಂಗ್ರಹಿಸಿ ನಿರ್ಮಿಸಿದ ''ಭಾಗವತ ಸಾರೋದ್ಧಾರ'' ಎಂಬ ಗ್ರಂಥ ನಿರ್ಮಾಣ ಮಾಡಿ, ಭಕ್ತ ಸಮೂಹಕ್ಕೆ ಜ್ಞಾನಾರ್ಜನೆಗೆ ಮಾರ್ಗದರ್ಶನ ಮಾಡಿದ್ದಾರೆ.

ಸರ್ವ ಸಿದ್ಧಿಯನ್ನು ಪಡೆದ ಈ ಮಹನೀಯರು ಕ್ಷಾಮ ಕಾಲದಲ್ಲಿ ಶಿಷ್ಯರ ರಕ್ಷಣೆ ಮಾಡಲು ಸ್ವಯಂ ತಾವೆ ರಚಿಸಿದ ''ರಮಾ ಸ್ತೋತ್ರ'' ಪಾರಾಯಣದಿಂದ ತಾಮ್ರದ ನಾಣ್ಯವನ್ನು ಬಂಗಾರವಾಗಿ ಪರಿವರ್ತಿಸಿ ಶಿಷ್ಯರನ್ನು ರಕ್ಷಿಸಿದ ಮಹಾನುಭಾವರು.

''ರುದ್ರಾಂಶ'' ಸಂಭೂತರೆಂದೇ ಜನ ನಂಬಿರುವ ಈ ಮಹನೀಯರು ''ಶಿವರಾತ್ರಿಯ'' ದಿವಸವೇ ವೃಂದಾವನದ ಪ್ರವೇಶ ಮಾಡಿ ''ದಕ್ಷಿಣ ಬದರಿ''

ಕ್ಷೇತ್ರವೆಂದೇ ಪ್ರಸಿದ್ಧವಾದ ಮಾದಿನೂರಿನಲ್ಲಿ ನೆಲೆಸಿದ ಇವರು ಇಂದಿಗೂ ಭಕ್ತರ ಕಾಮಧೇನುವಾಗಿ ಜನರನ್ನು ಆಕರ್ಷಿಸುತ್ತಾರೆ. ಈ ಮಹನೀಯರ ಯೋಗ್ಯತೆಯನ್ನು ಅರಿತ ಮಹಾಜನ ಸಮೂಹ ಆರಾಧನೆಯ ಸಮಯದಲ್ಲಿ ಭಾರೀ ಸಂಖ್ಯೆಯಲ್ಲಿ ಸೇರುವದೇ ಪ್ರತ್ಯಕ್ಷ ಸಾಕ್ಷಿ.

ಜನ ಸಾಮಾನ್ಯರು ನಿತ್ಯ ಜೀವನದ ಕ್ರಮ ಹೇಗೆ ನಡೆಸಬೇಕೆಂಬುದನ್ನು ''ಉಪದೇಶ ಪತ್ರ'' ಮೂಲಕ ತಿಳುವಳಿಕೆ ಮಾಡಿದ್ದಾರೆ. ಈ ಮಹನೀಯರ ಚರಿತ್ರೆ ಅವರ ಗ್ರಂಥಗಳನ್ನು ಅಚ್ಚ ಕನ್ನಡದಲ್ಲಿ ತಿಳಿಸಿದ ಪಂ. ಶ್ರೀಕರಾಚಾರ್ಯರ ಕಾರ್ಯವನ್ನು ನೋಡಿ ತುಂಬಾ ಸಂತೋಷವಾಗಿದೆ.

ಅವರ ಚರಿತ್ರೆಯನ್ನು ಜನ ಸಾಮಾನ್ಯರಿಗೆ ತಿಳಿಸಿದ ಲೇಖಕನಿಗೆ ಶ್ರೀ ವಿಷ್ಣುತೀರ್ಥರ ಆರಾಧ್ಯ ದೇವರು ಶ್ರೀ ಗೋಪಾಲಕೃಷ್ಣನು ಆಯು – ಆರೋಗ್ಯ ಮತ್ತು ಇನ್ನೂ ಅನೇಕ ಕೃತಿಗಳನ್ನು ನಿರ್ಮಿಸುವಂತೆ ಅನುಗ್ರಹ ಮಾಡಲೆಂದು ಪ್ರಾರ್ಥನೆ.

ಮಾದಿನೂರು
(ದಕ್ಷಿಣ ಬದರಿ ಕ್ಷೇತ್ರ)
ಜಿ. ಕೊಪ್ಪಳ

ಶ್ರೀ ವೆಂಕಣ್ಣಾಚಾರ್ಯ ಅಡವಿ
ಶ್ರೀ ಆನಂದತೀರ್ಥಾಚಾರ್ಯ ಅಡವಿ
ಕೂಸನೂರು, ಪರ್ಯಾಯಸ್ಥರು

# ಶುಭಾಶೀರ್ವಾದ

ಶ್ರೀಮಟ್ಟೀಕಾಕೃತ್ಪಾದರ ವರದಿಂದ ಹಾಗೂ ಆಜ್ಞೆಯಿಂದ ಅವರ ಗ್ರಂಥಗಳಿಗೆ (ನ್ಯಾಯ ಸುಧಾದಿ) ವ್ಯಾಖ್ಯಾನ ರಚಿಸಲಿಕ್ಕಾಗಿಯೇ ಭೂಮಿಯಲ್ಲಿ ಅವತರಿಸಿ ತಿರುಮಲಾರ್ಯರ ವಂಶಕ್ಕಷ್ಟೇ ಅಲ್ಲದೇ ಇಡೀ ಆಧ್ಯಾತ್ಮಿಕ ತತ್ವ ಚಿಂತಕರಿಗೆಲ್ಲ ಮೋಕ್ಷ ಮಾರ್ಗತೋರಿದ ಮಹಾನುಭಾವರು ಶ್ರೀ ವಿಷ್ಣುತೀರ್ಥರು ಸವಣೂರ ಪ್ರಾಂತದ ಸಿದ್ಧಾಪೂರದಲ್ಲಿ ಜನನ ಗರ್ಭಾಷ್ಟಮದಲ್ಲಿ ಉಪನಯನ ಸಂಸ್ಕಾರವನ್ನು ತಂದೆಯಿಂದ ಪಡೆದ ಇವರು ವೇದಶಾಸ್ತ್ರಾಭ್ಯಾಸ ಮಾಡಿದ್ದು ಪಂಡಿತ ಪ್ರಕಾಂಡರಾದ ಐಜಿ ವೆಂಕಟರಾಮಾಚಾರ್ಯರಲ್ಲಿ ಗುರುದಕ್ಷಿಣಾರೂಪದಲ್ಲಿ ಗುರುಪುತ್ರನ ಅಪಮೃತ್ಯು ಪರಿಹಾರ ಮಾಡಿ ಪ್ರೀತರಾದ ಗುರುಗಳ ಅನುಗ್ರಹ ಪಡೆದು ಶಾಸ್ತ್ರದಲ್ಲಿ ಹೇಳಿದಂತೆ ಏಕಾಪತ್ಯಉತ್ಪಾದ ಪರಿಯಂತವಷ್ಟೇ ಗ್ರಹಸ್ಥಾಶ್ರಮವನ್ನು ನಡೆಸಿ ಮಂಚ ಬಾರದು ಮಡದಿ ಬಾರಳು ಎಂಬ ದಾಸರ ಉಕ್ತಿಯಿಂದ ಪ್ರಭಾವಿತರಾಗಿ ವೈರಾಗ್ಯ ತಾಳಿ ಹನ್ನೆರಡು ವರ್ಷ ವಾನಪ್ರಸ್ಥ ಧರ್ಮದಿಂದ ಮುನವಳ್ಳಿ ಗ್ರಾಮದಲ್ಲಿ ವಾಸವಾಗಿದ್ದರು.

ಅಲ್ಲಿ ಅನೇಕ ಜನ ಶಿಷ್ಯರಿಗೆ ಪಾಠ ಹೇಳಿದ್ದು ಅಲ್ಲದೇ ಭಾಗವತ ಸಾರೋದ್ಧಾರ ಸುಧಾ ಟಿಪ್ಪಣಿ ಮುಂತಾದ ಗ್ರಂಥ ರಚನೆ ಮಾಡಿದರು. ಕಾಷ್ಟ ಮೌನ ಅಸಿಧಾರಾ ಇತ್ಯಾದಿ ಕಠಿಣ ವ್ರತಗಳನ್ನು ಆಚರಿಸಿದರು. ನಂತರ ಉತ್ತರಾದಿಮಠಾಧೀಶರಾದ ಶ್ರೀ ಸತ್ಯವರ ತೀರ್ಥರಲ್ಲಿ ಸನ್ಯಾಸ ಆಶ್ರಮ ಪಡೆದರು. ಅಸನ್ನಿಸಿತ ಶಿಷ್ಯರಿಗಾಗಿ ಆಜ್ಞಾಪತ್ರ ಹಾಗೂ ಉಪದೇಶ ಪತ್ರಗಳನ್ನು ಕಳುಹಿಸಿದರು. ಕಿನ್ನಾಳ ಪ್ರಾಂತಕ್ಕೆ ಬಂದು ಪೂರ್ವ ಜನ್ಮದ ಶಿಷ್ಯರನ್ನು ಉದ್ಧಾರ ಮಾಡಿ ಮುಂದೆ ಮಾದಿನೂರು ಕ್ಷೇತ್ರದಲ್ಲಿ ಕ್ರಿ.ಶ. 1806ರಲ್ಲಿ ವೃಂದಾವನ ಪ್ರವೇಶ ಮಾಡಿದರು.

ಈ ಎಲ್ಲ ವಿಷಯಗಳನ್ನೊಳಗೊಂಡ ಈ ಕೃತಿಯನ್ನು ನನ್ನ ತಮ್ಮ ಪಂಡಿತ ಶ್ರೀಕರಾಚಾರ್ಯ ಅಡವಿ ಇವನು ಪಂಚರತ್ನ ವಿಷ್ಣುತೀರ್ಥ ವಿಜಯ ಹಾಗೂ ಇನ್ನಿತರ ಪ್ರಾಚೀನ ಕೃತಿಗಳನ್ನು ಆಧರಿಸಿ ಪ್ರಾಮಾಣಿಕವಾಗಿ ವಿಷ್ಣುತೀರ್ಥರ ಚರಿತ್ರೆಯನ್ನು ಸಂಗ್ರಹಿಸಿದ್ದಾನೆ. ಶ್ರೀ 1008 ಶ್ರೀ ಸತ್ಯಾತ್ಮತೀರ್ಥರ ಅನುಗ್ರಹ ಸಂದೇಶವನ್ನು

ಪಡೆದಿದ್ದಾನೆ. ಉತ್ಸಾಹಿ ಯುವಕನಾದ ಇವನಿಂದ ಇನ್ನೂ ಹೆಚ್ಚಾಗಿ ಆರಣ್ಯಕಾಚಾರ್ಯರ ಸೇವಾ ಕಾರ್ಯ ನೆರವೇಲೆಂದು ಶ್ರೀ ಗೋಪಾಲಕೃಷ್ಣನಲ್ಲಿ ಪ್ರಾರ್ಥಿಸುತ್ತೇನೆ.

ಭಗವದ್ಭಕ್ತದಾಸ :
ಪಂಡಿತ ಜಯತೀರ್ಥಾಚಾರ್ಯ
ಗೋಪಾಲಕೃಷ್ಣಾಚಾರ್ಯ ಅಡವಿ, ಕೂಸನೂರ
ದಿನಾಂಕ : 1/2/2012 ಮಾಘಶುದ್ಧ ನವಮಿ ಆರಾಧನಾ ಪರ್ಯಾಯಸ್ಥರು.

# ಉಪದೇಶ ಪತ್ರ

ಶಿಷ್ಯರುಗಳಿಗೆ ಪ್ರತಿನಿತ್ಯದ ಸಮಯವನ್ನು ಹೇಗೆ ಸಾರ್ಥಕಗೊಳಿಸಬೇಕೆಂದು ಮತ್ತು ಉತ್ತಮ ದೇಹ ಸಾಧನಗಳು ಭರತಖಂಡದಂತಹ ಉತ್ತಮ ಕ್ಷೇತ್ರ ಇವುಗಳನ್ನು ಪಡೆದಾಗ ಸಾರ್ಥಕ ಪಡಿಸಿಕೊಳ್ಳುವ ಬಗೆ. ಅದನ್ನು ಬಿಟ್ಟು ಅಲ್ಪ ಲಾಭವೇ ದೊಡ್ಡ ಸಾಧನವೆಂದು ತಿಳಿದರೆ ಆಗುವ ಅನರ್ಥ ಮುಂತಾದವುಗಳನ್ನು ಅತಿ ನಿಷ್ಠುರವಾಗಿ ತಿಳಿಸುವ ಈ ಉಪದೇಶ ಪತ್ರವು ವಿಷ್ಣುತೀರ್ಥರ ನಿಷ್ಠೆಯನ್ನು ಹಾಗೂ ಶಿಷ್ಯರ ಬಗೆಗಿನ ಅವರ ಕಳಕಳಿಯನ್ನು ಬಿಂಬಿಸುವ ಒಂದು ಅಪೂರ್ವ ಪತ್ರ ಸಾಹಿತ್ಯ. ಇಲ್ಲಿಯವರೆಗೆ ಇದು ಗೋಕಾವಿ ಅನಂತಾದ್ರೀಶರಿಗೆ ಬರೆದ ಪತ್ರವೆಂದೇ ಪ್ರಸಿದ್ಧವಾಗಿದೆ. ಆದರೆ ವಿಷ್ಣುತೀರ್ಥರು ತಮ್ಮ ಎಲ್ಲ ಪ್ರಮುಖ ಶಿಷ್ಯರನ್ನು ಕುರಿತು ಈ ಪತ್ರವನ್ನು ಬರೆದು ಒಂದರಲ್ಲಿ ಮಾತ್ರ (ಗೋಕಾವಿ ಅನಂತಾದ್ರಿ, ಭೀಮಾಚಾರ್ಯರ) ಹೆಸರನ್ನು ಉಲ್ಲೇಖ ಮಾಡಿದ್ದಾರೆ. ಯಾರ ಹೆಸರನ್ನು ಉಲ್ಲೇಖಿಸದೇ ಹಾಗೆಯೇ ಬರೆದ ವಿಷ್ಣುತೀರ್ಥರ ಕೈ ಬರಹದ ಪ್ರತಿಯೊಂದು ಕೂಸನೂರಿನ ಪರ್ಯಾಯಸ್ಥರ ಸಂಗ್ರಹದಲ್ಲಿ ಉಪಲಬ್ಧವಿದೆ.

ವಿಷ್ಣುತೀರ್ಥರು ಉಪಯೋಗಿಸುತ್ತಿದ್ದ ಮುದ್ರೆಯ (ಈ ಮುದ್ರಿಕೆಯ ವರ್ಣಚಿತ್ರವನ್ನು ನೀಡಲಾಗಿದೆ) ಗುರುತನ್ನು ಹೊಂದಿರುವ ಈ ವಿಷ್ಣುತೀರ್ಥರ ಹಸ್ತಾಕ್ಷರದ ಪತ್ರವು ಮೊತ್ತ ಮೊದಲ ಬಾರಿಗೆ ಇಲ್ಲಿ ಪ್ರಕಟವಾಗಿದೆ. ಇದನ್ನು ಕೆಲವರು ಆಜ್ಞಾಪತ್ರವೆಂಬ ಹೆಸರಿನಿಂದ ಪ್ರಕಟಿಸಿರುವುದುಂಟು, ಈ ಹಸ್ತ ಪ್ರತಿಯ ಪ್ರಕಾರ ಇದಕ್ಕೆ ಉಪದೇಶ ಪತ್ರವೆಂದೇ ಹೆಸರು. ಈ ವಿಷ್ಣುತೀರ್ಥರು (ಪೂರ್ವಾಶ್ರಮದಲ್ಲಿ) ಮೊರಬ ಗ್ರಾಮದಲ್ಲಿ ಶೇಷಾಚಾರ್ಯರ ಗೃಹದಲ್ಲಿ ತಂಗಿದ್ದಾಗ ಅಲ್ಲಿ ತತ್ವಜಿಜ್ಞಾಸೆಗಾಗಿ ನೆರೆದಿದ್ದ ಶಿಷ್ಯ ಸಮೂಹವನ್ನು ಉದ್ದೇಶಿಸಿ ಅವರು ನೀಡಿದ ಉಪದೇಶ ಎಂಬುದಾಗಿ ''ಪಂಚರತ್ನ ಪ್ರಭಾದಲ್ಲಿ'' ಇದು ಸಮಗ್ರವಾಗಿ ಉಲ್ಲೇಖಿಸಲ್ಪಟ್ಟಿದೆ. ಉಪದೇಶದ ಸಮಯದಲ್ಲಿ ಇಲ್ಲದಿದ್ದ ಶಿಷ್ಯರು ಉಪಯೋಗಕ್ಕಾಗಿ ಸ್ವಯಂ ವಿಷ್ಣುತೀರ್ಥರೇ ಇದನ್ನು ಬರೆಸಿ ಅವರಿಗೆಲ್ಲ ಕಳುಹಿಸಿಕೊಟ್ಟರಂತೆ ಆದ್ದರಿಂದ ಇದು ''ಆಜ್ಞಾಪತ್ರ'' ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿದೆ. (ಏವಂ ಜಯತೀರ್ಥಾಚಾರ್ಯಃ ಸನ್ನಿಹಿತಾನ್

ಶಿಷ್ಯಾನ್ ಸಾಕ್ಷಾದುಪದಿಶ್ಯ ಅಸನ್ನಿಸಿತ ಶಿಷ್ಯ ಶಿಕ್ಷಣಾಯ ಆಜ್ಞಾಪತ್ರಂ ಲಿಖಿತ್ವಾ ಪ್ರೇಷಯಾಮಾಸ) ಭಗವದರ್ಪಣ ಬುದ್ಧಿಯಿಂದ ಅಪರೋಕ್ಷಜ್ಞಾನ ಪೂರ್ವದಲ್ಲೂ, ಅನಂತರದಲ್ಲೂ ಸ್ವವಿಹಿತಕರ್ಮಾನುಷ್ಠಾನವನ್ನು ಅವಶ್ಯವಾಗಿ ಮಾಡಬೇಕೆಂಬ ಪ್ರಮೇಯವನ್ನು ಮನೋಹರವಾಗಿ ನಿರೂಪಿಸುವ ಈ ಕೃತಿ ವಿಷ್ಣುತೀರ್ಥರ ಶಿಷ್ಯ ಶಿಕ್ಷಣದ ಆಸ್ಥೆಯನ್ನು ಬಿಂಬಿಸುತ್ತದೆ.

ಈ ಉಪದೇಶವನ್ನು ಕೇಳಿದ ಶಿಷ್ಯರು ಕಲಿಯನ್ನು ನೋಡಲು ಅಪೇಕ್ಷಿಸಿದಾಗ ಕಲಿಯ ಲಕ್ಷಣವನ್ನು ಹೇಳಿ ಕಲಿಯನ್ನು ತೋರಿಸಿದರೆಂಬ ಉಲ್ಲೇಖ ಪಂಚರತ್ನ ಪ್ರಭಾದಲ್ಲಿ ಇದೆ. ಇದರ ವಿವರವನ್ನು ಚರಿತ್ರೆಯಲ್ಲಿ ನೀಡಲಾಗಿದೆ.

# ಮುನ್ನುಡಿ

ದ್ವೈತವೇದಾಂತದ ಇತಿಹಾಸದಲ್ಲಿ ವಿಷ್ಣುತೀರ್ಥರದು ವಿಶಿಷ್ಟವಾದ ಸ್ಥಾನ. ಆಚಾರ್ಯ ಮಧ್ವರ ಸಾಕ್ಷಾತ್ ಸಹೋದರರಾದ ಶ್ರೀ ವಿಷ್ಣುತೀರ್ಥರ ನಂತರ ಪ್ರಸಿದ್ಧರಾದ ಮತ್ತೊಬ್ಬ ವಿಷ್ಣುತೀರ್ಥರೆಂದರೆ ಅಡವಿ ಆಚಾರ್ಯರು ಅರಣ್ಯಕಾ-ಚಾರ್ಯರು ಎಂದು ಪ್ರಸಿದ್ಧರಾದ ಮಾದಿನೂರಿನ ವಿಷ್ಣುತೀರ್ಥರೇ ಆಗಿದ್ದಾರೆ. ಈ ಗ್ರಂಥವು ವಿಷ್ಣುತೀರ್ಥರ ಜೀವನ ಮತ್ತು ಕೃತಿಗಳಿಗೆ ಸಂಬಂಧ ಪಟ್ಟ ಕೃತಿ.

ತಮ್ಮ ಪಾಠ ಪ್ರವಚನ, ಗ್ರಂಥನಿರ್ಮಾಣ ಶಿಷ್ಯ ಪರಂಪರೆ ಬೆಳೆಸುವ ಮುಖಾಂತರ ಆಚಾರ್ಯರ ಸೇವೆಯನ್ನು ಮಾಡಿದ ಮಹನೀಯರು ಮೂರು ವಿಧವಾಗಿದ್ದಾರೆ. ಪೀಠಾಧಿಪತಿಗಳು, ಬಿಡಿ ಸನ್ಯಾಸಿಗಳು, ಗೃಹಸ್ಥಾಶ್ರಮಿಗಳು ಎಂಬುದಾಗಿ, ಶ್ರೀಮದಾಚಾರ್ಯರ ಹಾಗೂ ಟೀಕಾಕೃತ್ಪಾದರ ಸೇವೆಗಾಗಿಯೇ ತಮ್ಮನ್ನು ಮೀಸಲಿಟ್ಟ ''ಬಿಡಿ ಸನ್ಯಾಸಿಗಳೆಂಬ'' ಒಂದು ವಿಶಿಷ್ಟ ವರ್ಗವನ್ನೇ ದ್ವೈತವೇದಾಂತದ ಇತಿಹಾಸದಲ್ಲಿ ಕಾಣಬಹುದು. ಈ ಪರಂಪರೆಯಲ್ಲಿ ಶ್ರೀ ವ್ಯಾಸತೀರ್ಥರು, ಶ್ರೀ ಉಚ್ಛಿಷ್ಟ ಭಿಕ್ಷುಗಳು, ಶ್ರೀವೇದೇಶತೀರ್ಥರು, ಶ್ರೀಕೃಷ್ಣದ್ವೈಪಾಯನ ತೀರ್ಥರು, ಶ್ರೀಯಾದವೇಂದ್ರ ತೀರ್ಥರು, ಶ್ರೀ ವ್ಯಾಸತತ್ವಜ್ಞ ತೀರ್ಥರು ಮೊದಲಾದವರು ಈ ರೀತಿಯ ಮಹನೀಯರಲ್ಲಿ ಪ್ರಮುಖರು. ಶ್ರೀ ವಿಷ್ಣುತೀರ್ಥರು ಈ ಶ್ರೇಣಿಯ ಗಮನಾರ್ಹ ವ್ಯಕ್ತಿಗಳಲ್ಲಿ ಕಾಲಕ್ರಮದಲ್ಲಿ ತುಂಬಾ ಇತ್ತೀಚಿನವರು.

ಶ್ರೀರಘೂತ್ತಮರು ಹಾಗೂ ಯಾದವಾರ್ಯರ ಅನಂತರ ಶಿಷ್ಯ ಮನೆತನಗಳ ಪರಂಪರೆಯನ್ನೇ ಹೊಂದಿದ ಕೆಲವೇ ಟಿಪ್ಪಣಿಕಾರರಲ್ಲಿ ವಿಷ್ಣುತೀರ್ಥರು ಒಬ್ಬರು ಎಂಬುದು ಇವರ ಮತ್ತೊಂದು ಹಿರಿಮೆ.

### ಶಿಷ್ಯರುಗಳು

ಪುತ್ರರಾದ ಕೃಷ್ಣಾಚಾರ್ಯರು, ಗೋಕಾವಿ ಅನಂತಾದ್ರಿ, ಭೀಮಾಚಾರ್ಯರು, ಶೂರ್ಪ (ಮೊರಬ ಶೇಷಾಚಾರ್ಯರು) ಹಾಗೂ ಅವರ ಪುತ್ರ ಮೊರಬ ರಾಮಾಚಾರ್ಯರು, ಟೊಣಪಿ (ಮೌದ್ಗಗ್ರ) ಬಾಳಾಚಾರ್ಯರು, ಇವರ ಪುತ್ರ ಟೊಣಪಿ ಅಣ್ಣಯ್ಯಾಚಾರ್ಯರು (ಸಂಸ್ಕೃತದ ಪಂಚರತ್ನದ ಕರ್ತೃಗಳು) ಕೌಲಗಿ ವೆಂಕಟಾಚಾರ್ಯರು, ಅಣ್ಣಿಗೇರಿ ಅಣ್ಣಯ್ಯಾಚಾರ್ಯರು ಸತ್ತಿಗೇರಿಯವರು ಇವರ ನೂರಾರು ಶಿಷ್ಯರಲ್ಲಿ ಪ್ರಮುಖರು. ಪುತ್ರರಾದ ಕೃಷ್ಣಾಚಾರ್ಯರನ್ನು ಸಹ

ಟಿಪ್ಪಣೀಕಾರರನ್ನಾಗಿ ರೂಪಿಸಿದ್ದು ಇವರ ಮತ್ತೊಂದು ಹಿರಿಮೆ. ಕೃಷ್ಣಾಚಾರ್ಯರನ್ನು ಸಹ ಟಿಪ್ಪಣೀಕಾರರನ್ನಾಗಿ ರೂಪಿಸಿದ್ದು ಇವರ ಮತ್ತೊಂದು ಹಿರಿಮೆ. ಕೃಷ್ಣಾಚಾರ್ಯರು ಉದ್ದಾಮ ಪಂಡಿತರೂ ಶ್ರೇಷ್ಠ ಗ್ರಂಥಕಾರರೂ ಆಗಿದ್ದಾರೆ ಅವರ ಗ್ರಂಥಗಳಲ್ಲಿ ನ್ಯಾಯಸುಧಾ ಟಿಪ್ಪಣೀ (ಲಘುರಸರಂಜಿನಿ) ತತ್ವ ಪ್ರಕಾಶಿಕಾ ಟಿಪ್ಪಣಿ ಸುಮನೋ-ರಂಜಿನೀ ನ್ಯಾಯಸುಧಾ ಸ್ತೋತ್ರ ವ್ಯಾಖ್ಯಾನ ಮತ್ತು ಶ್ರೀ ವಿಷ್ಣುತೀರ್ಥಸ್ತೋತ್ರ (ಪರಿಶಿಷ್ಟದಲ್ಲಿ ಕೊಟ್ಟಿದೆ) ಗಳು ಉಪಲಬ್ಧವಿವೆ.

ಅನಂತಾದ್ರಿ ಭೀಮಾಚಾರ್ಯರು ಸಹ ಶ್ರೇಷ್ಠ ಜ್ಞಾನಿಗಳು ಸರಸ ಕವಿಗಳು ''ಅನಂತಾದ್ರೀಶ'' ಎಂಬ ಅಂಕಿತದಿಂದ ಅವರು ರಚಿಸಿರುವ ಅನೇಕ ದೇವರ ನಾಮಗಳು ಮತ್ತು ಶ್ರೀ ವೆಂಕಟೇಶ ಪಾರಿಜಾತ ಎಂಬ ಕನ್ನಡಕೃತಿ ವಿಶೇಷ ಪ್ರಚಾರ-ದಲ್ಲಿವೆ. ವಿಷ್ಣುತೀರ್ಥರ ಚರಿತೆಯನ್ನು ವಿಸ್ತಾರವಾಗಿ ತಿಳಿಸುವ 800 ಶ್ಲೋಕಗಳ ಕನ್ನಡ ಪಂಚರತ್ನ ಅಲ್ಲದೇ ವಿಷ್ಣುತೀರ್ಥರ ಮೇಲೆ ಅನೇಕ ಕನ್ನಡ ಪದ್ಯಗಳನ್ನು ರಚಿಸಿದ್ದಾರೆ.

ಮೌದ್ಗರ ಟೋಣಪಿ ಬಾಳಾಚಾರ್ಯರು ಸಹ ಒಬ್ಬ ಉತ್ತಮ ಗ್ರಂಥಕಾರರು ಅವರ ಗ್ರಂಥಗಳಲ್ಲಿ ತತ್ವ ಪ್ರಕಾಶಿಕಾ ಟಿಪ್ಪಣೀ ಮತ್ತು ಐತರೇಯ ಭಾಷ್ಯ (ರಹಸ್ಯ ರಂಜಿನೀ) ಎಂಬ ಎರಡು ಗ್ರಂಥಗಳು ಉಪಲಬ್ಧವಿವೆ. ತಾವು ವಿಷ್ಣುತೀರ್ಥರಿಂದ ಮೂರು ಬಾರಿ ಐತರೇಯೋಪನಿಷತ್ತಿನ ಉಪದೇಶವನ್ನು ಹೊಂದಿದ್ದುದಾಗಿ ಅವರೇ ಕೃತಜ್ಞತೆಯಿಂದ ಸ್ಮರಿಸುತ್ತಾರೆ.

## ಚರಿತ್ರೆಯ ಆಕರ ಗ್ರಂಥಗಳು

ಎರಡು ಶತಮಾನಗಳಿಗಿಂತ ಹಿಂದೆ ಆಗಿ ಹೋದ ವ್ಯಕ್ತಿಯ ಪರಿಚಯ ಮಾಡಿ ಕೊಡುವುದು ಸುಲಭ ಸಾಧ್ಯವಲ್ಲ. ಅದಕ್ಕೆ ನಿಖರವಾದ ಆಧಾರಗಳು ಬೇಕು. ಅಂಥ ಆಧಾರಗಳಲ್ಲಿ ಪ್ರಥಮತಃ ಆ ವ್ಯಕ್ತಿಯೇ ಬರೆದಿಟ್ಟ ದಾಖಲೆಗೆ ಹೆಚ್ಚಿನ ಪ್ರಾಶಸ್ತ್ಯ. ಎರಡನೆಯದಾಗಿ ಅವರ ಶಿಷ್ಯರು ಅಥವಾ ಆತ್ಮೀಯರು ಬರೆದಿರುವ ಸ್ತೋತ್ರ ಅಥವಾ ಪ್ರಬಂಧಗಳು, ಮೂರನೆಯದಾಗಿ ಆ ವ್ಯಕ್ತಿಯು ತನ್ನ ಸಮಕಾಲೀನ ವ್ಯಕ್ತಿಗಳಿಗೆ ಬರೆದ ಪತ್ರಗಳು ಅದಕ್ಕೆ ಉತ್ತರವಾಗಿ ಇತ್ಯಾದಿಗಳಿಂದ ಸ್ವಲ್ಪ ಮಟ್ಟಿಗೆ ಸಂಗ್ರಹಿಸಬಹುದು. ಕೊನೆಯದಾಗಿ ಒಬ್ಬರಿಂದ ಒಬ್ಬರಿಗೆ ಕಥಾರೂಪದಲ್ಲಿ ಪ್ರವಹಿಸಿ ಬಂದ ಆಖ್ಯಾಯಿಕೆಗಳೂ ಈ ವಿಷಯದಲ್ಲಿ ಸಹಾಯಕವಾಗುತ್ತವೆ.

ಪ್ರಕೃತ ಗ್ರಂಥ ಲೇಖನಕ್ಕೆ ಈ ಎಲ್ಲ ತರಹದ ಆಧಾರಗಳನ್ನು ವಿಮರ್ಶೆ ಮಾಡಿ ವಿರೋಧಗಳನ್ನು ಹಾಗೂ ವಿವಾದಗಳನ್ನು ವಿಚಾರಿಸಿ ಬಹು ಸಮ್ಮತವಾದ ವಿಚಾರಗಳನ್ನೇ

ಅಂಗೀಕಾರ ಮಾಡಿಕೊಂಡು ಚರಿತ್ರೆಯನ್ನು ಬರೆಯಲಾಗಿದೆ. ಇದಕ್ಕೆ ಆಧಾರ ಗ್ರಂಥಗಳು 243 ಶ್ಲೋಕಗಳ ಸಂಸ್ಕೃತ ಪಂಚರತ್ನ. ಸುಮಾರು 800 ಪದ್ಯಗಳ ಕನ್ನಡ ಪಂಚರತ್ನ ವಿಷ್ಣುತೀರ್ಥರ ಪತ್ರಗಳು ಪುತ್ರ ಕೃಷ್ಣಾಚಾರ್ಯ ವಿರಚಿತ ಸ್ತೋತ್ರಗಳು ಅಂತಾದ್ರೀಶರು ಮತ್ತು ಇತರರರಿಂದ ರಚಿತವಾದ ಕನ್ನಡ ಪದ್ಯಗಳು.

### ಸಂಸ್ಕೃತ ಪಂಚರತ್ನ

ವಿಷ್ಣುತೀರ್ಥರ ಚರಿತೆಯನ್ನು ದಾಖಲಿಸಿದ ಮೊತ್ತ ಮೊದಲ ಗ್ರಂಥ ಎಂಬ ಮಾನ್ಯತೆ ಇದರದು. ಐದು ಅಧ್ಯಾಯಗಳಲ್ಲಿ (ರತ್ನಗಳು) 243 ಶ್ಲೋಕಗಳಲ್ಲಿ ನಿರ್ಮಿತವಾದ ಇದು ಪ್ರಾತಃ ವಿಷ್ಣುತೀರ್ಥರ ಸನ್ಯಾಸ ಪೂರ್ವದಲ್ಲಿಯೇ ರಚಿತವಾದುದು. ವಿಷ್ಣುತೀರ್ಥರ ಮುನಿವಳ್ಳಿಯ ಮನಪ್ರಸ್ಥದವರೆಗಿನ ವಿವರಗಳನ್ನು ಮಾತ್ರ ದಾಖಲಿಸುವ ಇದರಲ್ಲಿ ಸನ್ಯಾಸವಾಗಲಿ ನಂತರದ ಘಟನೆಗಳಾಗಲೀ ದೊರಕುವುದಿಲ್ಲ. ಇದು ವಿಷ್ಣುತೀರ್ಥರ ಪುತ್ರರಾದ ಕೃಷ್ಣಾಚಾರ್ಯರ ರಚನೆಯಿಂದೇ ಬಹುಶಃ ಎಲ್ಲರೂ ಭಾವಿಸಿ ಹಾಗೆಯೇ ಬರೆದಿದ್ದಾರೆ. ಆದರೆ ಇದರ ಮೌದ್ಗಲ ಬಾಲಸೂರಿಗಳ ಪುತ್ರರಾದ ಅಣ್ಣಾರ್ಯರ ಕೃತಿಯೆಂದು ಇದರ ವ್ಯಾಖ್ಯಾನವು (ಪಂಚರತ್ನ ಪ್ರಭಾ) ಕೃಷ್ಣಾಚಾರ್ಯರ ರಚನೆಯೆಂದು ತಿಳಿಸುವ ಶ್ಲೋಕವೊಂದು (ಗೂಢಕರ್ತೃ) ಕೂಸನೂರಿನ ಪರ್ಯಾಯಸ್ಥರ (ಜಯತೀರ್ಥಾಚಾರ್ಯರ) ಸಂಗ್ರಹದಲ್ಲಿ ದೊರಕಿದ್ದು ಅದು ವಿಷ್ಣುತೀರ್ಥ ಕೃತಿ ಮಂಜರಿಯಲ್ಲಿ ಮುದ್ರಿತವಾಗಿದ್ದು ಅದರ ಪಾಠ ಹೀಗಿದೆ.

**ಶ್ರೀಮತ್ಕವಿರಾಜರಾಜಿ ಮುಕುಟಾಲಂಕಾರ ಹೀರಾಯಿತೈಃ**
**ಶ್ರೀಮನ್ಮುದ್ಗಲ ಬಾಲಸೂರಿ ತನಯೈರಣ್ಣಾರ್ಯವರ್ಯೈಃ ಕೃತಮ್ ।**
**ಶ್ರೀಮಚ್ಛ್ರೀಗುರುರಾಡ್ ಜಯಾರ್ಯಚರಿತಂ ಶ್ರೀ ಪಂಚರತ್ನಾಭಿದಂ**
**ವ್ಯಾಚಖ್ಯುರ್ಗುರವೋ ದಿಗಂತ ಯಶಸ್ಮಸ್ತಾನ್ ಕೃಷ್ಣವರ್ಯಾನ್ನುಮಃ ॥**

### ಕನ್ನಡ ಪಂಚರತ್ನ

ವಿಷ್ಣುತೀರ್ಥರ ಶಿಷ್ಯರಾದ ಗೋಕಾವಿ ಭೀಮಾಚಾರ್ಯರಿಂದ (ಅನಂತಾದ್ರೀಶ) ರಚಿತವಾದ ಇದು ಸಂಸ್ಕೃತ ಪಂಚರತ್ನದ ಅನುವಾದ ಆದರಲ್ಲಿ ಇಲ್ಲದ ಅನೇಕ ಅಪೂರ್ವ ವಿಷಯಗಳನ್ನು ಒಳಗೊಂಡಂತೆ ಸುಮಾರು 800 ಶ್ಲೋಕಗಳ ಸುಂದರ ಕನ್ನಡ ರಚನೆಯಾಗಿದೆ. ಇದರಲ್ಲೂ ವಿಷ್ಣುತೀರ್ಥರ ವಾನಪ್ರಸ್ಥದ ಆಚರಣೆಯವರೆಗಿನ

ವಿಷಯಗಳನ್ನು ವಿಸ್ತಾರವಾಗಿ ನಿರೂಪಿಸಲಾಗಿದೆ. ಸನ್ಯಾಸದ ಬಗೆಗಾಗಲೀ ನಂತರದ ಮಹಿಮೆಗಳ ಬಗೆಗಾಗಲೀ ಯಾವ ಉಲ್ಲೇಖ ದೊರಕುವುದಿಲ್ಲ. ಬಹುಶಃ ಇದು ಸಂಸ್ಕೃತ ಕೃತಿಯ ಅನುವಾದವಾದುದರಿಂದ ವಿಷ್ಣುತೀರ್ಥರನ್ನು ಕುರಿತು ಅನೇಕ ಸ್ತೋತ್ರ, ಹಾಡುಗಳು, ಪರಾಕುಗಳನ್ನು ರಚಿಸಿದ ಅನಂತ್ರಾದೀಶರು ಪಂಚರತ್ನದಲ್ಲಿ ಮಾತ್ರ ಮುನವಳ್ಳಿಯ ವಾಸದ ನಂತರದ ಘಟನೆಗಳನ್ನು ಉಲ್ಲೇಖಿಸುವುದಿಲ್ಲ. ಇವುಗಳಲ್ಲದೇ ಕೃಷ್ಣಾಚಾರ್ಯರು ರಚಿಸಿದ ಸ್ತೋತ್ರ ಹಾಗೂ ಇತರರ ಸ್ತೋತ್ರಗಳು ಕನ್ನಡದ ಹಾಡುಗಳು ಸಹ ಚರಿತೆಯ ಲೇಖನಕ್ಕೆ ಆಧಾರವಾಗಿವೆ.

ಸಂಶೋಧನಾತ್ಮಕ ಮಹಾಮಹಿಮರಾದ ವಿಷ್ಣುತೀರ್ಥರನ್ನು ಕುರಿತು ಒಂದು ಗ್ರಂಥವನ್ನು ಬರೆಯಬೇಕೆಂಬ ಹಂಬಲವಿತ್ತು ಎರಡು-ಮೂರು ವರ್ಷಗಳಿಂದ ಸಂಕಲ್ಪವು ಸಂಕಲ್ಪವಾಗಿಯೇ ಉಳಿದಿತ್ತು. ಈ ವರುಷ ಬೇಗ ಪ್ರಾರಂಭ ಮಾಡಿ ಮುಗಿಸಬೇಕೆಂದಿದ್ದೆ. ಅಷ್ಟರಲ್ಲಿ ಹುಬ್ಬಳ್ಳಿಯ ಚಾತುರ್ಮಾಸ್ಯದ ಸ್ಮರಣ ಸಂಚಿಕೆಯ ಸಂಪಾದಕತ್ವದ ಹೊಣೆ ಹೆಗಲೇರಿತು. ಅದು ಮುಗಿಯುತ್ತಿದ್ದಂತೆಯೇ ನೂರೆಂಟು ಕೆಲಸಗಳು, ಅನೇಕ ತೊಂದರೆಗಳು ಆದರೂ ದೃಢವಾದ ಮನಸ್ಸಿನಿಂದ ಕೈಗೆತ್ತಿಕೊಂಡೆ ಆರಾಧನೆಯ ಕೆಲಸಗಳನ್ನೆಲ್ಲ ಬದಿಗೊತ್ತಿ ಬರೆಯಲು ಕುಳಿತೆ. ವಿಷ್ಣುತೀರ್ಥರೇ ಕೈ ಹಿಡಿದು ಮುನ್ನಡೆಸಿದರು. ಅವರು ಪ್ರೇರಣೆ ಮಾಡಿದಂತೆ ಬರೆಯುತ್ತ ಸಾಗಿದ್ದೇನೆ. ಇದೀಗ ಪುಸ್ತಕ ತಯಾರಿಗಿ ನಿಮ್ಮ ಕೈಲಿದೆ. ಇನ್ನು ಇದನ್ನು ಕುರಿತು ಹೇಳಬೇಕಾದವರು ತಾವು. ನಾನು ಕೇವಲ ಕೃತಜ್ಞತೆ ಸಲ್ಲಿಸಬೇಕಾದವ.

ಪುಸ್ತಕ ಬರೆಯುತ್ತೇನೆಂದು ಕೇಳಿದ ಕೂಡಲೇ ತಮ್ಮ ಬಿಡುವಿಲ್ಲದ ಕಾರ್ಯಗಳ ಮಧ್ಯೆಯು ಅನುಗ್ರಹ ಸಂದೇಶ ಬರೆದುಕೊಟ್ಟು ಮಂತ್ರಾಕ್ಷತೆ ನೀಡಿ, ಬೆನ್ನು ತಟ್ಟಿ ಅನುಗ್ರಹಿಸಿದ. ಜಗದ್ಗುರು ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶ್ವರರಾದ ಜಂಗಮ ವಿಶ್ವಕೋಶದಂತಿರುವ ಅಶ್ರುತ ಪ್ರತಿಭೆಯ ಖಣಿಗಳಾದ, ಚೈತನ್ಯದ ಚಿಲುಮೆಯಾದ ಶ್ರೀ ಶ್ರೀ 1008 ಶ್ರೀ ಸತ್ಯಾತ್ಮ ಶ್ರೀಪಾದಂಗಳವರ ಚರಣಗಳಿಗೆ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ತಮ್ಮ ಬುದ್ಧಿಯನ್ನು ಅಧ್ಯಯನಕ್ಕೆ ಸಮಯವನ್ನು ಪಾಠ ಪ್ರವಚನಗಳಿಗೆ ಸಂಪತ್ತನ್ನು ದಾನಕ್ಕೆ ಮೀಸಲಿಟ್ಟು ವಿದ್ಯಾರ್ಥಿಗಳ ಪ್ರಗತಿಗಾಗಿಯೇ ತಮ್ಮನ್ನು ಮುಡಿಪಾಗಿಟ್ಟಿರುವ, ಪುಸ್ತಕ ಲೇಖನಕ್ಕೆ ಅನುಗ್ರಹ ಸಂದೇಶ ನೀಡಿ ಧೈರ್ಯ ತುಂಬಿ. ಅನ್ನ, ವಸ್ತ್ರ ವಿದ್ಯೆ ನೀಡಿ ಉದ್ಧರಿಸಿದ ವಿದ್ಯಾ ಗುರುಗಳಾದ ಸತ್ಯಧ್ಯಾನ ವಿದ್ಯಾಪೀಠದ ಕುಲಪತಿಗಳಾದ

ಆಚಾರ್ಯ (ಮಾಹುಲಿ ವಿದ್ಯಾಸಿಂಹಾಚಾರ್ಯ) ಪಾದಗಳಲ್ಲಿ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಪುಸ್ತಕಕ್ಕೆ ಮುನ್ನುಡಿಗಳನ್ನು ನೀಡಿ ಅನುಗ್ರಹಿಸಿದ ವಿಷ್ಣುತೀರ್ಥರ ಪರ್ಯಾಯಸ್ಥರಾದ ಶ್ರೀ ವೆಂಕಣ್ಣಾಚಾರ್ಯ ವಿ. ಅಡವಿ ಮತ್ತು ತೀರ್ಥರೂಪರಾದ ಶ್ರೀ ಆನಂದ ತೀರ್ಥಾಚಾರ್ಯ ಅಥವಿ ಹಾಗೂ ಉತ್ತಮ ವಿದ್ವಾಂಸರಾದ ವಿಷ್ಣುತೀರ್ಥರ ಉಪದೇಶ ಪತ್ರದ ಹಸ್ತ ಪ್ರತಿಯನ್ನು ನೀಡಿ ಉಪಕರಿಸಿದ ಅಣ್ಣಂದಿರಾದ ಪಂ. ಜಯತೀರ್ಥಾ ಚಾರ್ಯ ಅವಡಿ ಇವರಿಗೆಲ್ಲ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಪುಸ್ತಕ ಪ್ರಕಟಣೆಯು ಬಹಳ ವೆಚ್ಚದ ಕೆಲಸ ಅದರಲ್ಲೂ ವ್ಯವಸ್ಥಿತ ಮಾರುಕಟ್ಟೆಯಿಲ್ಲದ ನಮ್ಮಂಥವರಿಗೆ ಹಾನಿಯ ಕೆಲಸವೇ ಸರಿ. ಹೀಗಿರುವಾಗ ದಾನಿಗಳ ಬೆಂಬಲವೇ ಧಾರ್ಮಿಕ ಪುಸ್ತಕಗಳ ಪ್ರಕಾಶನಕ್ಕೆ ಶ್ರೀರಕ್ಷೆ. ಪ್ರಕೃತ ಪುಸ್ತಕ ಪ್ರಕಾಶನಕ್ಕೆ ಅನೇಕ ದಾನಿಗಳು ಉದಾರವಾಗಿ ಸೇವೆ ಸಲ್ಲಿಸಿದ್ದಾರೆ. (ದಾನಿಗಳ ಹೆಸರುಗಳನ್ನು ಪ್ರತ್ಯೇಕವಾಗಿ ಮುದ್ರಿಸಲಾಗಿದೆ) ಈ ಎಲ್ಲ ದಾನಿಗಳಿಗೂ ಕೃತಜ್ಞತೆಗಳು.

ಪ್ರಕೃತ ಗ್ರಂಥ ರಚನೆಗೆ ಅನೇಕ ಲೇಖಕರ ಕೃತಿಗಳನ್ನು ಆಧರಿಸಿಕೊಂಡು ರಚನೆ ಮಾಡಿದ್ದೇನೆ. ಅದರಲ್ಲಿ ಪ್ರಧಾನವಾಗಿ ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯರ 'ವಿಷ್ಣುತೀರ್ಥ ಕೃತಿ ಮಂಜರಿ' ಹಾಗೂ ಗುರು ಗೋವಿಂದ ವಿಠಲದಾಸರ 'ಹರಿಭಕ್ತ ವಿಜಯ-ಭಾಗ-5' ಜಯಸಿಂಹ ಆವರ 'ವಿಷ್ಣುತೀರ್ಥ ದರ್ಶನ' ಅಲ್ಲದೇ ಇನ್ನನೇಕ ಲೇಖಕರ ಕೃತಿಗಳನ್ನು ಉಪಯೋಗಿಸಿಕೊಂಡಿದ್ದೇನೆ. ವಿಷ್ಣುತೀರ್ಥರ ವಿಶೇಷ ಸೇವೆ ಸಲ್ಲಿಸಿದ ಎಲ್ಲ ಲೇಖಕರಿಗೂ ಕೃತಜ್ಞನಾಗಿದ್ದೇನೆ. ಸಂದರ್ಭಕ್ಕನುಸಾರವಾಗಿ ಕೆಲವು ಲೇಖಕರ ವಿಚಾರಗಳನ್ನು ವಿಮರ್ಶೆ ಮಾಡಿದ್ದೇನೆ. ಅದು ಮುಂದಿನ ಪೀಳಿಗೆಗೆ ಯತಾರ್ಥವಾದ ಚರಿತ್ರೆಯನ್ನು ಮುಟ್ಟಿಸುವ ಉದ್ದೇಶದಿಂದಲೇ ಹೊರತು ಯಾರನ್ನು ಖಂಡನೆ ಮಾಡುವ ಉದ್ದೇಶದಿಂದ ಬರೆದದ್ದಲ್ಲ.

ಗ್ರಂಥ ಲೇಖನವು ಬಹಳ ಸಮಯವನ್ನು ಬೇಡುವ ಕೆಲಸ. ಎಲ್ಲ ಕೆಲಸವನ್ನು ಬದಿಗೊತ್ತಿ ಇದಕ್ಕಾಗಿ ಕೂರಬೇಕು. ಇದು ಕುಟುಂಬದ ಬೆಂಬಲವಿದ್ದರೆ ಮಾತ್ರ ಸಾಧ್ಯ. ಜವಾಬ್ದಾರಿಗಳನ್ನು ತನ್ನ ಹೆಗಲಿನ ಮೇಲೆ ಹೊತ್ತು ಲೇಖನ ಕಾರ್ಯದಲ್ಲಿ ನನ್ನನ್ನು ತೊಡಗಿಸಿದ ನನ್ನ ಅಣ್ಣನಾದ ಶ್ರೀ ಶ್ರೀನಿವಾಸಾಚಾರ್ಯ ಅಡವಿ ಹಾಗೂ ಕುಟುಂಬದ ಸದಸ್ಯರಿಗೆ ಕೃತಜ್ಞತೆಗಳು.

ನಾನು ಮಾಡುವ ಎಲ್ಲ ಧಾರ್ಮಿಕ ಕೆಲಸ ಹಾಗೂ ವಿಷ್ಣುತೀರ್ಥರ ಆರಾಧನೆಯ ಜವಾಬ್ದಾರಿಗಳಲ್ಲಿ ಆಧಾರ ಸ್ತಂಭವಾಗಿ ನಿಂತವರು ಮಾತುಲರಾದ ಶ್ರೀನಿವಾಸಾ-ಚಾರ್ಯ ಕಟ್ಟಿ. ಅವರು ನೀಡಿದ ಎಲ್ಲ ತರಹದ ಬೆಂಬಲವೇ ಇದರ ಲೇಖನಕ್ಕೆ ಪ್ರೇರಕಶಕ್ತಿ ಅವರಿಗೂ ಕೃತಜ್ಞತೆಗಳು.

ಪುಸ್ತಕ ನಿರ್ಮಾಣದ ಎಲ್ಲ ಹಂತಗಳಲ್ಲೂ ನನಗೆ ಧೈರ್ಯ ನೀಡುತ್ತ ಬೆಂಬಲವಾಗಿ ನಿಂತು ಪುಸ್ತಕವನ್ನು ಹೊರಗೆ ತಂದವರು ಶ್ರೀ ರಾಘವೇಂದ್ರಾಚಾರ್ಯ ಮಣ್ಣೂರ ಅವರಿಗೂ ನನ್ನ ಕೃತಜ್ಞತೆಗಳು.

ಕರಡು ತಿದ್ದುವ ಕಾರ್ಯದಲ್ಲಿ ಸಹಕಾರ ನೀಡಿದವರು ಆತ್ಮೀಯರಾದ ಶ್ರೀ ಹನುಮಂತಾಚಾರ್ಯ ಪುರೋಹಿತ ಅವರಿಗೂ ಧನ್ಯವಾದಗಳು. ಮುಖಪುಟ ವಿನ್ಯಾಸ ವರ್ಣಚಿತ್ರಗಳ ವಿನ್ಯಾಸ ಗ್ರಾಫಿಕ ಆರ್ಟ್ಸ್ ಗಿರೀಶ ಜೋಶಿಯವರದು ಮುದ್ರಣ ಮಕರಂದ ಮುದ್ರಣಾಲಯ ಅವರದು ಅವರಿಗೆಲ್ಲ ಧನ್ಯವಾದಗಳು.

ಪುಸ್ತಕವನ್ನು ಸಾಧ್ಯವಾದಮಟ್ಟಿಗೆ ಶುದ್ಧವಾಗಿ ಹೊರ ತರಲು ಪ್ರಯತ್ನಿಸಿದ್ದೇನೆ. ಆದರೆ ಮುದ್ರಾರಾಕ್ಷಸನ ಹಾವಳಿ ಎಲ್ಲೆಡೆ ಇರುವುದು. ಸಮಯದ ಅಭಾವದಿಂದ ಕೆಲವು ಕಡೆ ಲೋಪಗಳಾಗಿರುವುದು ಸಹಜ. ಈ ಪುಸ್ತಕ ಪರಿಪೂರ್ಣವಾಗಿದೆ ಎಂಬ ಭ್ರಮೆಯೇನೂ ನನಗಿಲ್ಲ. ಏನಾದರೂ ವ್ಯತ್ಯಾಸಗಳಾಗಿದ್ದಲ್ಲಿ ಸಾಧಾರವಾಗಿ ಅದನ್ನು ತೋರಿಸಿದರೆ ಇನ್ನೊಂದು ಆವೃತ್ತಿಯಲ್ಲಾಗಲೀ ಬೇರೆ ಕಡೆ ಬರೆಯುವ ಸಂದರ್ಭದಲ್ಲಿ-ಯಾಗಲೀ ತಿದ್ದುಕೊಳ್ಳಲು ಸಹಾಯಕವಾಗುವುದು.

ಕೊನೆಯದಾಗಿ ಈ ಕೃತಿ ಪ್ರಕಟವಾಗುತ್ತಿರುವುದು ಶ್ರೀ ವ್ಯಾಸತತ್ವಜ್ಞ ಪ್ರತಿಷ್ಠಾನದಿಂದ ಈ ಸಂಸ್ಥೆ ನನ್ನ ತೀರ್ಥರೂಪರಾದ ಆನಂದತೀರ್ಥಾಚಾರ್ಯ ಕನಸಿನ ಕೂಸು ಅನೇಕ ತೊಂದರೆಗಳ ನಡುವೆಯೂ ಮೆಲ್ಲಡಿಯಿಡುತ್ತಾ ಪ್ರಕಾಶನ ಕಾರ್ಯವನ್ನು ಮುಂದುವರೆಸಿದೆ. ಪ್ರಕೃತ ಈ ಕೃತಿ ಪ್ರತಿಷ್ಠಾನದ 6ನೆಯ ಪ್ರಕಟಣೆಯಾಗಿ ಹೊರ ಹೊಮ್ಮುತ್ತಿದೆ. ಇದನ್ನು ಪ್ರಕಟಿಸುತ್ತಿರುವ ಸಂಸ್ಥೆಯ ಎಲ್ಲ ಪದಾಧಿಕಾರಿಗಳಿಗೂ ಹಾಗೂ ತಮ್ಮೆಲ್ಲ ಕೆಲಸ ಕಾರ್ಯಗಳ ಮಧ್ಯೆಯೂ ಸಂಸ್ಥೆಗಾಗಿ ದುಡಿಯುತ್ತಿರುವ ಡಾ|| ಅಶೋಕ ಚಚಡಿ ಅವರಿಗೂ ಧನ್ಯವಾದಗಳು.

ವಿಷ್ಣುತೀರ್ಥ ಚರಣ ಸೇವಕ ಗುರ್ವನುಗ್ರಹಾಕಾಂಕ್ಷಿ

**ಪಂ. ಶ್ರೀಕರಾಚಾರ್ಯ ಅಡವಿ**

ಕೂಸನೂರು.

### ಅವಧೂತ ಶಿರೋಮಣಿ

# ಶ್ರೀ ವಿಷ್ಣುತೀರ್ಥರು

**''ಶ್ರೀ ವಿಷ್ಣುತೀರ್ಥ ಗುರ್ವಂತರ್ಗತ ಶ್ರೀ ಗೋಪಾಲಕೃಷ್ಣ ಪ್ರಸೀದತು''**
**''ಸಾರ್ಧತ್ರಿಕೋಟ್ಯುತ್ತಮ ತೀರ್ಥಮಜ್ಜನಂ ಯಚ್ಚಿಂತನಂ ತಂ ಭಜ ವಿಷ್ಣುತೀರ್ಥಮ್''**

ಹದಿನೆಂಟನೇ ಶತಮಾನದ ಆರಂಭಕಾಲ. ''ಷಣ್ಮಾಸ ಫಲದಾ ಗೋದಾ'' ಎಂದು ಆರುತಿಂಗಳ ನಾಮಸ್ಮರಣೆಯ, ಉಪವಾಸದ ಫಲ ನೀಡುವಳು ಎಂದು ಪ್ರಮಾಣ ಪ್ರಸಿದ್ಧಳಾದ, ಗೌತಮ ಋಷಿಗಳ ಪ್ರಚಂಡ ತಪಸ್ಸಿಗೆ ಒಲಿದು ನದೀರೂಪಳಾಗಿ ಹರಿಯುತ್ತಿರುವ ''ವೃದ್ಧಗಂಗೆ'' ಗೋದಾವರಿಯ ತೀರ. ಅಲ್ಲೊಂದು ಮಹಾಪರ್ವಕಾಲ, ಪಾವನತಮಳಾದ ಗೋದಾವರಿಯಲ್ಲಿ ಮಿಂದು ತಮ್ಮ ಪಾಪರಾಶಿಗಳನ್ನು ಕಳೆದುಕೊಳ್ಳುವ ಹಂಬಲದಿಂದ ಸೇರಿದ ಅಪಾರ ಭಕ್ತವೃಂದ. ತಮ್ಮತಮ್ಮಲ್ಲೇ ತತ್ವ ಜಿಜ್ಞಾಸೆಯನ್ನು ಭಗವಂತನ ಗುಣಗುಣಗಳ ಚಿಂತನೆಯನ್ನು ನಡೆಸುತ್ತಿದೆ. ಇಂತಹ ವಿಶೇಷ ಪರ್ವ ಕಾಲದಲ್ಲಿ ಯಾದೃಚ್ಛಿಕವಾಗಿ ಅಲ್ಲೊಬ್ಬ ಭೂಸುರನ ಆಗಮನವಾಯಿತು. ಮುಖದಲ್ಲಿ ಏನೋ ಸಾರ್ಥಕ ಭಾವ, ದರ್ಶನೀಯ ಪುರುಷನ ಆಕಸ್ಮಿಕ ಆಗಮನದಿಂದ ಎಲ್ಲರೂ ಚಕಿತರಾದರು. ಬಂದ ಅತಿಥಿಯನ್ನು ಕುಳ್ಳಿರಿಸಿ ಯೋಗ್ಯ ಸತ್ಕಾರಗಳನ್ನು ನೀಡಿದ ನಂತರ ಕುತೂಹಲಿಗಳಾಗಿ ಪ್ರಶ್ನಿಸಿದರು. ವಿಪ್ರೋತ್ತಮರೇ ತಮ್ಮ ಆಗಮನ ಎಲ್ಲಿಂದ ಎಂದು. ನಾನು ಅರಣ್ಯಕಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀ ವಿಷ್ಣುತೀರ್ಥರ ದರ್ಶನದಿಂದ ಪೂರ್ಣ ಮನೋರಥನಾಗಿ ಬಂದಿದ್ದೇನೆ. ನಿಮ್ಮಂತಹ ಸಜ್ಜನರ ಸಂಗಮದಿಂದ ಮತ್ತೊಮ್ಮೆ ಪುಣ್ಯಚರಿತರ ಸ್ಮೃತಿಯಾಗಿದೆ. ನಾನು ಧನ್ಯನಾದೆ ಎಂದುತ್ತರಿಸಿದ ಆ ಬ್ರಾಹ್ಮಣ.

ಭಕ್ತರು ಆಶ್ಚರ್ಯಕರವಾದ ಅವರ ಮಹಿಮೆಯನ್ನು ತಿಳಿಯಲು ಕುತೂಹಲಿಗಳಾಗಿದ್ದೇವೆ. ಅರಹುವ ಕೃಪೆ ಮಾಡಬೇಕು ಎಂದು ಪ್ರಾರ್ಥಿಸಿದರು.

ಬ್ರಾಹ್ಮಣನು ಅನಿತರ ಸಾಧಾರಣ ಮಹಿಮೆಯಿಂದ ದೇವಾಂಶ (ರುದ್ರಾಂಶ) ಸಂಭೂತರೆಂದೇ ಪ್ರಸಿದ್ಧರಾದ ಅವರ ಮಹಿಮೆಯನ್ನು ಸಾಕಲ್ಯೇನ ಹೇಳುವುದು ಅಸಾಧ್ಯವೇ ಸರಿ. ಆದರೂ ನನ್ನ ಮನಃ ಶುದ್ಧಿಗಾಗಿ ನನಗೆ ತಿಳಿದಷ್ಟು ವರ್ಣಿಸುವೆ ಎಂದು ಹೇಳಿದ.

ಹಾಗಾದರೆ ಅವರಾರು, ಅವರು ಯಾರ ಶಿಷ್ಯರು. ಅವತರಿಸಿದ ಕಾರಣವೇನು, ಅವರದು ಯಾವ ದೇಶ, ಅವತರಿಸಿದ ವಂಶಯಾವುದು, ಮಾತಾಪಿತೃಗಳು ಯಾರು, ಅವರ ಶಿಷ್ಯ ಪರಂಪರೆ ಯಾವುದು, ಅವರ ಅಲೌಕಿಕ ಮಹಿಮೆಗಳಾವವು ನಮಗೆ ಕೃಪೆ ಮಾಡಿ ತಿಳಿಸಬೇಕು ಎಂದು ಭಕ್ತರೆಲ್ಲ ಪ್ರಾರ್ಥಿಸಿದರು. ಬ್ರಾಹ್ಮಣನು ಜ್ಞಾನಿವರೇಣ್ಯರ ಚರಿತ್ರೆಯನ್ನು ಕೇಳುವ ಮನಸ್ಸು ಒದಗಿಬಂದ ನೀವೇ ಧನ್ಯರು ಎಂದು ವರ್ಣಿಸಿ ಹೇಳಲು ಉಪಕ್ರಮಿಸಿದ.

ಜಯಾರ್ಯರ ಚರಿತ್ರೆಯು ಆಶ್ಚರ್ಯಕರವಾದುದು. ಅಲ್ಪಪುಣ್ಯವುಳ್ಳ ಮಂದಭಾಗ್ಯರಿಗೆ ಇವರ ಚರಿತೆಯು ದುರ್ಲಭವಾದುದು. ಸಾಗರದಂತೆ ವಿಶಾಲವಾದ ಅವರ ಚರಿತಾಮೃತದಲ್ಲಿ ನನಗೆ ತಿಳಿದುದು ಅತ್ಯಲ್ಪ. ಅಲ್ಪ ಚರಿತ್ರೆಯನ್ನು ತಿಳಿದುದರಿಂದಲೇ ನಾನು ಧನ್ಯನಾಗಿದ್ದೇನೆ. ಕಥಾನಾಯಕರಾದ ವಿಷ್ಣುತೀರ್ಥರನ್ನು ಹಾಗೂ ಅವರ ಆರಾಧ್ಯ ಗುರುಗಳಾದ (ಜಯತೀರ್ಥ) ಟೀಕಾಕೃತ್ಪಾದರನ್ನು ವಂದಿಸಿ ನನ್ನ ಬುದ್ಧಿಗನುಗುಣವಾಗಿ ವಾಚನಶುದ್ಧಿಗಾಗಿ ಅನುವಾದ ಮಾಡುತ್ತೇನೆ.

ನಿತ್ಯಾನಂದ ಪ್ರದವಾದ ಆನಂದತೀರ್ಥ ಭಗವತ್ಪಾದರ ಶಾಸ್ತ್ರತೀರ್ಥದಲ್ಲಿ, ಸರ್ವಮೂಲಗಳೆಂಬ ಮಾನಸ ಸರೋವರದಲ್ಲಿ ನಿರಂತರ ರಾಜಹಂಸದಂತೆ ವಿಹರಿಸುವ ಪರಮಹಂಸರ ಚರಿತೆಯನ್ನು ಏನೆಂದು ವರ್ಣಿಸಲಿ. ಕುಹಕಿಗಳಾದ ಅಸಜ್ಜನರ ದುಷ್ಟವಾಕ್ಯಗಳನ್ನು ಹಗಲು ರಾತ್ರಿ ಸ್ಮರಿಸುತ್ತ ''ದಿವಾನಿಶಂ ತಪ್ಯತಿ ಮರ್ಮತಾಡಿತಃ'' ಎಂಬಂತೆ ಜನರು ದುಃಖ ಪಡುತ್ತಿದ್ದಾರೆ. ಆದರೆ ಜಯಾರ್ಯರು ಮಾತ್ರ ಕುಹಕಿಗಳ ಅವಾಚ್ಯ ವಚನಗಳನ್ನು ಕೇಳಿಯೂ ಪ್ರತ್ಯುತ್ತರ ನೀಡದೇ ''ಕಾಷ್ಠಮೌನ'' ವ್ರತಾದಿಗಳಲ್ಲಿ ರತರಾದ ಅವರ ಮನೋ ನಿಗ್ರಹವನ್ನು ಏನೆಂದು ವರ್ಣಿಸಲಿ.

ಸೌಂದರ್ಯ ಸೌಶೀಲ್ಯಾದಿ ಗುಣವತಿಯಾದ ತಮ್ಮ ಧರ್ಮಪತ್ನಿ ಹಾಗೂ ಏಕೈಕ ಶಿಶುವಿನೊಡನೆ ಗೃಹ, ಧನ, ಕನಕಾದಿ ಸಮಸ್ತ ಭೋಗ ಸಾಮಗ್ರಿಗಳನ್ನು ತ್ಯಾಗಮಾಡಿ, ವೈರಾಗ್ಯವನ್ನು ಆಭರಣವನ್ನಾಗಿ ಧರಿಸಿ ಮನೆಯಿಂದ ಹೊರಟ ಪರಮಾಶ್ಚರ್ಯಕರ ವೀರವೈರಾಗ್ಯವನ್ನು ವರ್ಣಿಸಲಸದಳವೇ.

ಶರೀರದಲ್ಲಿರುವ ಇಡಾ, ಪಿಂಗಳಾ, ಸುಷುಮ್ನಾಗಳೆಂಬ ನಾಡಿಗತ ಗಂಗಾಸ್ನಾನವನ್ನು ನಿರಂತರ ಮಾಡುವವರ ಗಂಗಾದಿ ತೀರ್ಥಯಾತ್ರೆಗಳನ್ನು ವರ್ಣಿಸಲೇ, ಸುಖತೀರ್ಥರ

ತೀರ್ಥದ ನಿರಂತರ ಅರ್ಥ ವಿಚಾರಗಳಿಂದ ಕೃತಾರ್ಥರಾದವರು ತೀರ್ಥಯಾತ್ರೆಗಳಿಂದ ಕೀರ್ತಿ ಪಡೆದವರೆಂದು ಹೇಳುವುದೇ.

ತಮ್ಮ ಹೃದಯ ಕಮಲ ಕರ್ಣಿಕೆಯ ಮಧ್ಯದಲ್ಲಿ ನಿರಂತರವಾಗಿ ಬಿಂಬಮೂರ್ತಿಯ ದರ್ಶನ ಮಾಡುವ ಬಿಂಬೋಪಾಸಕರು ಕ್ಷೇತ್ರಗಳಿಗೆ ತೆರಳಿ ಮೂರ್ತಿಗಳನ್ನು ದರ್ಶನ ಮಾಡಿದರೆಂದು ತಿಳಿಸುವುದೇ.

ತಮ್ಮ ಶರೀರದ ಬಲಭಾಗದ 36 ಸಾವಿರ ನಾಡಿಗಳಲ್ಲಿ ಸ್ವರ ಪ್ರತಿಪಾದ್ಯವಾದ ಭಗವಂತನ 36 ಸಾವಿರ ಪುರುಷ ರೂಪಗಳನ್ನು ಹಾಗೂ ಎಡಭಾಗದ 36 ಸಾವಿರ ನಾಡಿಗಳಲ್ಲಿರುವ ವ್ಯಂಜನ ಪ್ರತಿಪಾದ್ಯವಾದ ಭಗವಂತನ 36 ಸಾವಿರ ಸ್ತ್ರೀ ರೂಪಗಳನ್ನು ನಿರಂತರ ಚಿಂತಿಸಿ ನಿರಂತರ 36 ಸಾವಿರ ದಂಪತಿಗಳಿಗೆ ಭೋಜನ ಮಾಡಿಸಿದ ಪುಣ್ಯಭಾಗಿಗಳ ಅನ್ನದಾನಗಳನ್ನು ವರ್ಣಿಸಬೇಕೆ.

ಕೃತ, ತ್ರೇತ, ದ್ವಾಪರಯುಗಗಳಲ್ಲಿ ಸದಾಚಾರ ವಿಚಕ್ಷಣರಾದ ಜನರು ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ತಮ್ಮ ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ವಿಧ್ಯುಕ್ತವಾಗಿ ಆಚರಿಸಿ ಯಾವ ಪುಣ್ಯವನ್ನು ಪಡೆಯುತ್ತಾರೋ, ಅಂತಹ ವಿಶಿಷ್ಟಪುಣ್ಯ ಸಂಪಾದನೆಯ ಉಪಾಯವನ್ನು ತಮ್ಮ ಭಕ್ತರಿಗೆ ಉಪದೇಶ ಮಾಡಿದ ಪುಣ್ಯಪುರುಷರ ಚರಿತೆಯನ್ನು ಏನೆಂದು ಹೇಳಲಿ.

ಹೀಗಿದ್ದರೂ ನಿಷ್ಕಿಂಚನರ, ತಪೋಧನರ, ಏಕಾಂತಭಕ್ತರ ಉತ್ತಮ ಶ್ಲೋಕರ ಕ್ಷಣಕಾಲದ ಗುಣಾನುವರ್ಣನೆಯೂ ಕೂಡ, ಪೂರ್ವ ಸಂಚಿತ ಪುಣ್ಯವನ್ನು ಅಭಿವೃದ್ಧಗೊಳಿಸಿ ಎಲ್ಲ ಪಾಪ ಪರ್ವತಗಳನ್ನು ಕತ್ತರಿಸಿ ಹಾಕುತ್ತದೆ ಎಂಬುದಾಗಿ ಶಾಸ್ತ್ರ ತಿಳಿಸುವದರಿಂದ ಭಗವದ್ಭಕ್ತಿ ಲತೆಗೆ ನೀರಿನಂತಿರುವ ಗುರುಚರಿತೆಯನ್ನು ಸಂಕ್ಷಿಪ್ತವಾಗಿ ತಿಳಿಸುತ್ತೇನೆ ಎಂದು ಹೇಳಲಾರಂಭಿಸಿದನು.

## ಜಯತೀರ್ಥರ ಪೂರ್ವಜರು

ಸಾಧನಭೂಮಿ, ಕರ್ಮಕ್ಷೇತ್ರವೆಂದೇ ಪ್ರಸಿದ್ಧವಾದ ಭರತಖಂಡದಲ್ಲಿರುವ ಕೃಷ್ಣಾ ಮತ್ತು ತುಂಗಾ ನದಿಗಳ ಮಧ್ಯದಲ್ಲಿ, ಭೂದೇವಿಗೆ ಆಲಂಕಾರ ಪ್ರಾಯವಾದ, ಮನೋಹರ ಭೂಪ್ರದೇಶ ಒಂದಿದೆ. ಇಂತಹ ಪುಣ್ಯಕ್ಷೇತ್ರದಲ್ಲಿ 17ನೇ ಶತಮಾನದ ಆದಿ ಭಾಗದಲ್ಲಿ ತಿರುಮಲಾಚಾರ್ಯರೆಂಬ ಮಹಾನುಭಾವರು ವಾಸವಾಗಿದ್ದರು.

ನಿರಂತರ ಭಗವಂತನ ಪಾದಕಮಲಗಳ ಧ್ಯಾನದಿಂದ ಶುದ್ಧಾಂತಃಕರಣವುಳ್ಳವರಾದ ಪೂರ್ಣಿಮೆಯ ಚಂದ್ರನಂತೆ ಮುಖಕಾಂತಿಯುಳ್ಳ, ನಿಗೂಢವೃತ್ತಿಯ ಈ ಮಹಾ ಭಗವದ್ಭಕ್ತರು, ನಿರಂತರ ಭಾಗವತಾದಿ ಸಚ್ಛಾಸ್ತ್ರಗಳಲ್ಲಿ ರತರಾಗಿದ್ದರು. ಪ್ರಚ್ಛನ್ನವೇಷದ ಧನಂಜಯನಂತೆ ತೋರುತ್ತಿದ್ದರು. ''ಪ್ರಾಪ್ತಂ ಪ್ರಾಪ್ತಂ ಉಪಾಸೀತ'' ಎಂಬಂತೆ ಜೀವನದಲ್ಲೊದಗುವ ಎಲ್ಲ ಸುಖ ದುಃಖಗಳನ್ನು ಭಗವಂತನ ಇಚ್ಛೆಯಿಂದೊದಗಿದ ಮಹಾಪ್ರಸಾದವೆಂಬಂತೆ ಸ್ವೀಕರಿಸಿ ನಿರಂತರ ಭಗವಧ್ಯಾನದಲ್ಲಿ ನಿರತರಾಗುತ್ತಿದ್ದ ಅವರ ಮುಖದಿಂದ ಬಂದ ಪ್ರತಿಯೊಂದು ವಾಕ್ಯವೂ ಸತ್ಯವಾಗುತ್ತಿದ್ದುದನ್ನು ನೋಡಿದ ಜನಗಳು ಅವರನ್ನು ತ್ರಿಕಾಲಜ್ಞರೆಂದೇ ಕರೆಯುತ್ತಿದ್ದರು.

## ನಿಗೂಢವೃತ್ತಿಯ ಜ್ಞಾನಿಗಳು

ಹೀಗೆ ತ್ರಿಕರಣಗಳನ್ನು ಭಗವಂತನಲ್ಲಿ ತೊಡಗಿಸಿ ನಿಗೂಢ ವೃತ್ತಿಯ ಜಡಭರತರಂತೆ, ಜೀವನ ನಡೆಸುತ್ತಿದ್ದ ತಿರುಮಲಾರ್ಯರ ಮಹಿಮೆಯನ್ನು ಜಗತ್ತಿಗೆ ತಿಳಿಸುವ ಘಟನೆಯೊಂದು ಜರುಗಿತು. ಭೂಮಿಯಲ್ಲಿ ಇಂತಹ ಮಹಾಮಹಿಮ ಸಜ್ಜನರು, ಭಗವದ್ಭಕ್ತರು, ನಿರಪೇಕ್ಷರು ಇರುವಾಗ, ಅವರನ್ನು ನಿಂದಿಸುವ ಕುಹಕಿಗಳು, ದ್ವೇಷಿಸುವ ದುರ್ಜನರು, ಪರೀಕ್ಷಿಸುವ ಅವಿವೇಕಿಗಳು ಇರುವುದು ಸಹಜವಷ್ಟೇ. ಇಂತಹ ಕುಹಕಿಗಳು ಒಂದು ದಿನ ಅವರನ್ನು ಪರೀಕ್ಷಿಸಬೇಕೆಂದು ಅವರ ಮನೆಯ ಹತ್ತಿರ ಬಂದು ಮುಚ್ಚಿದ ಬಾಗಿಲಿನ ಸಂದುಗಳಿಂದ, ಕಿಟಕಿಗಳ ಸರಳುಗಳಿಂದ ಮನೆಯ ಮೇಲಿನ ಬೆಳಕಿಂಡಿಗಳಿಂದ ಇವರನ್ನು ನೋಡುತ್ತ ನಿಂತಿದ್ದಾರೆ. ಇದಾವುದರ ಪರಿವೇ ಇಲ್ಲದೇ ಭಗವಂತನಲ್ಲಿ ಮನವಿಟ್ಟು ಭಾಗವತವನ್ನು ಓದುತ್ತ ಅರ್ಥಾನುಸಂಧಾನದಿಂದ ಪುಳಕಿತರಾದ ಮನಸ್ಸುಳ್ಳವರಿಗೆ, ಒಂದೊಂದೇ ಭಾಗವತ ಶ್ಲೋಕಗಳನ್ನು ಬಾಯಿಂದ ಉಚ್ಚರಿಸುತ್ತ ಹಸ್ತಗಳಲ್ಲಿ ಭಾಗವತ ಗ್ರಂಥ ಹಿಡಿದುಕೊಂಡು ಆನಂದ ಭಾಷ್ಪಗಳಿಂದ ತುಂಬಿದ ಕಣ್ಣುಳ್ಳವರಾಗಿ ಗದ್ಗದ ಕಂಠದಿಂದ ಭಗವಂತನನ್ನು ಸ್ತುತಿಸುತ್ತಾ, ಸ್ವಚ್ಛಂದವಾಗಿ ನರ್ತಿಸುತ್ತಾ ಭಕ್ತಿರಸದಲ್ಲಿ ಮುಳುಗಿಹೋಗಿದ್ದಾರೆ.

**ವಾಗ್ಗದ್ಗದಾ ದ್ರವತೇ ಯಸ್ಯಚಿತ್ತಂ ರುದತ್ಯಭೀಕ್ಷ್ಣಂ ಹಸತಿಕ್ವಚಿಚ್ಚ । ವಿಲಜ್ಜ ಉದ್ಗಾಯತಿ ನೃತ್ಯತೇಚ ಮದ್ಭಕ್ತಿ ಯುಕ್ತೋ ಭುವನಂ ಪುನಾತಿ.**

ಎಂಬ ಭಾಗವತ ಶ್ಲೋಕಕ್ಕೆ ಪ್ರತ್ಯಕ್ಷ ನಿದರ್ಶನವಾಗಿ ತೋರುತ್ತಿದ್ದಾರೆ ತಿರುಮಲಾಚಾರ್ಯರು. ಮರೆಯಲ್ಲಿ ನಿಂತು ಅವರನ್ನು ಪರೀಕ್ಷೆ ಮಾಡುತ್ತಿದ್ದ ಜನಗಳು

ಅವರ ಭಕ್ತಿ ಪರಾಕಾಷ್ಠೆಯನ್ನು ನೋಡಿ ಆಶ್ಚರ್ಯಚಕಿತರಾಗಿದ್ದಾರೆ. ಭಗವಂತನ ಅನುಗ್ರಹದಿಂದ ಅವರ ಮನದಲ್ಲಿದ್ದ ತಪ್ಪು ತಿಳಿವಳಿಕೆಯನ್ನು ಕಳೆದುಕೊಂಡು ತಿರುಮಲಾಚಾರ್ಯರ ಪಾದಗಳಿಗೆರಗಿ ತಮ್ಮನ್ನು ಕ್ಷಮಿಸುವಂತೆ ಕೇಳಿಕೊಂಡರು. ದ್ವೇಷಾಸೂಯೆಗಳೊಂದನ್ನು ಅರಿಯದ ತಿರುಮಲಾಚಾರ್ಯರು ಅವರನ್ನು ಕ್ಷಮಿಸಿದ್ದೆ ಅಲ್ಲದೇ ನಿರ್ಮಲಾಂತಃಕರಣದಿಂದ ಆಶೀರ್ವದಿಸಿದರು. ಭಗವಂತನಲ್ಲಿ ವಿಶೇಷ ಭಕ್ತಿಯನ್ನು ಬೆಳೆಸಿಕೊಳ್ಳುವಂತೆ ಉಪದೇಶ ನೀಡಿ ಕಳುಹಿಸಿದರು. ಈ ಘಟನೆಯಿಂದ ತಿರುಮಲಾಚಾರ್ಯರ ಕೀರ್ತಿ ದಿಗಂತ ವಿಶ್ರಾಂತವಾಯಿತು. ಅವರು ಪುಟಕ್ಕಿಟ್ಟ ಚಿನ್ನದಂತೆ ಶೋಭಿಸಿದರು.

ಈ ರೀತಿಯಾಗಿ ಸರ್ವಾತ್ಮಾನಾ ಭಗವಂತನನ್ನು ನಂಬಿಕೊಂಡು, ಜಲದೊಳಗಿನ ಪದ್ಮ ಪತ್ರದಂತೆ ಗ್ರಹಸ್ಥಾಶ್ರಮವನ್ನು ಅನುಭವಿಸುತ್ತಿದ್ದ ತಿರುಮಲಾಚಾರ್ಯರಿಗೆ ಪತ್ನಿ ವಿಯೋಗವಾಯಿತು. ಪತ್ನಿ ವಿಯೋಗವನ್ನು ಶ್ರೀಹರಿ ಸಂಕಲ್ಪವೆಂದು ನಿರ್ಲಿಪ್ತರಾಗಿ ಸ್ವೀಕರಿಸಿದರು ತಿರುಮಲಾಚಾರ್ಯರು. ಸಂತಾನ ಹೀನರಾದ ತಾವು ಪಿತೃಋಣದಿಂದ ಮುಕ್ತರಾಗುವುದು ಹೇಗೆಂಬ ವಿಚಾರ ಅವರನ್ನು ಬಾಧಿಸುತ್ತಿತ್ತು. ಆವಾಗಲೇ ಅವರ ವಯಸ್ಸು 64 ದಾಟಿತ್ತು. ವೃದ್ಧನಾದ ತನಗೆ ಇನ್ನು ಸಂತಾನ ಪ್ರಾಪ್ತಿಯುಂಟೇ, ಪಿತೃಋಣದಿಂದ ಮುಕ್ತಿಯುಂಟೇ ಎಂದು ವಿಚಾರಿಸುತ್ತಿದ್ದ ಅವರಿಗೆ ಭಗವಂತನೇ ಮುಂದಿನ ಮಾರ್ಗವನ್ನು ತೋರಿದ. ಆ ಮಾರ್ಗದಲ್ಲಿ ನಡೆಯಲು ಪ್ರೇರೇಪಿಸಿದ.

ಭಗವಂತನ ಇಚ್ಛೆಯಿಂದ ಮುಂದೆ ನಡೆಯುವ ಕೌತುಕಪೂರ್ಣ ವಿಚಾರಗಳನ್ನು ತಿಳಿದ ತಿರುಮಲಾಚಾರ್ಯರು ಒಂದು ದಿನ ಸುಂದರ ಸುಪ್ರಭಾತದಲ್ಲಿ ಎದ್ದು, ತಮ್ಮ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಮುಪ್ಪಿಡಿದ ದೇಹಕ್ಕೆ ಆಧಾರವಾಗಿ ಕೋಲೂರಿಕೊಂಡು ಅಲ್ಲಿಯ ರಾಜನಾಗಿದ್ದ ರಾಜನೃಸಿಂಹಭೂಪಾಲನ ಮನೆಗೆ ಕನ್ಯಾಪೇಕ್ಷಿಯಾಗಿ ನಡೆದರು.

ತಿರುಮಲಾಚಾರ್ಯರನ್ನು ತನ್ನ ಅರಮನೆಯಲ್ಲಿ ಕಂಡ ನೃಸಿಂಹ ಭೂಪಾಲನಿಗೆ ಪರಮಾಶ್ಚರ್ಯ. ತನ್ನ ಕಣ್ಣುಗಳನ್ನು ತಾನೇ ನಂಬಲಾರದ ಸ್ಥಿತಿಯಲ್ಲಿದ್ದ ರಾಜ. ಆದರೂ ಸತ್ಯ ಅವನ ಕಣ್ಮುಂದೆ ಸ್ಫುಟವಾಗಿತ್ತು. ಆಶ್ಚರ್ಯಚಕಿತನಾದ ರಾಜನು ಸಭೆಯನ್ನು ಕರೆದು ಹಿಂದಿನ ದಿನದ ರಾತ್ರಿಯಲ್ಲಿ ನಡೆದ ವೃತ್ತಾಂತವನ್ನು ಹೇಳಿಕೊಂಡ. ಸಭಿಕರೇ ನಿನ್ನೆ ರಾತ್ರಿ ನಿದ್ರಾ ಕಾಲದಲ್ಲಿ ನಾನೊಂದು ಸ್ವಪ್ನವನ್ನು ಕಂಡೆ. ಕನಸಿನಲ್ಲಿ ಓರ್ವ

ಬ್ರಾಹ್ಮಣ ಯುವಕ ಆಗಮಿಸಿದ್ದಾನೆ. ಸದೃಢವಾದ ಶರೀರ ಸೌಷ್ಟವ ಸುಂದರ ಮುಖಾರವಿಂದದ ಲೋಕಮೋಹಕವಾದ ಸೌಂದರ್ಯರಾಶಿ, ಪಾದಕಮಲಗಳನ್ನು ಮುತ್ತಿಕ್ಕುವ ಸುಂದರ ಕುಸುಮಮಾಲೆ. ಕನಸಿನಲ್ಲಿ ದರ್ಶನ ನೀಡಿದ ಬ್ರಾಹ್ಮಣ ದೃಢ ಸ್ವರದಲ್ಲಿ ನುಡಿದ. ಹೇ ರಾಜನೇ ಗಮನವಿಟ್ಟು ಕೇಳು. ನಾಳೆ ಬೆಳಗಿನ ಜಾವದಲ್ಲಿ ಕಾಶಿನಾಥಶಾಸ್ತ್ರಿಯೆಂಬ ಸಕಲಶಾಸ್ತ್ರಪಾರಂಗತನಾದ, ಅದ್ವೈತ ಸಿದ್ಧಾಂತಿಯು ನಿನ್ನ ಅರಮನೆಗೆ ಆಗಮಿಸುತ್ತಾನೆ. 'ಅಹಂ ಬ್ರಹ್ಮಾಸ್ಮಿ' ಎಂಬ ತತ್ವೋಪದೇಶಕನಾದ ಅವನು ವಾಕ್ಯಾರ್ಥದಲ್ಲಿ ಜಯಗಳಿಸಿ, ಜಯಪತ್ರಿಕೆ ಪಡೆಯುವ ಉದ್ದೇಶದಿಂದ ನಿನ್ನಲ್ಲಿಗೆ ಬರುತ್ತಾನೆ. ಇದೇ ಸಮಯದಲ್ಲಿ ತಿರುಮಲಾಚಾರ್ಯರೆಂಬ ವೃದ್ಧಬ್ರಾಹ್ಮಣನು ನಿನ್ನಲ್ಲಿಗೆ ಆಗಮಿಸಿ ಆ ಕಾಶಿನಾಥ ಶಾಸ್ತ್ರಿಯನ್ನು ವಾಗ್ಯುದ್ಧದಲ್ಲಿ ಸೋಲಿಸಿ ಜಯಗಳಿಸುತ್ತಾನೆ. ಆ ಬ್ರಾಹ್ಮಣನು ನಿನ್ನ ಮನೆಗೆ ಕನ್ಯಾಪೇಕ್ಷೆಯಿಂದ ಆಗಮಿಸುತ್ತಾನೆ. ಯಾವುದೇ ರೀತಿಯಿಂದಲೂ ಸಂಶಯಿಸದೇ ನಿನ್ನ ಪುತ್ರಿಯನ್ನು ಆತನಿಗೆ ಧಾರೆಯೆರೆದು ಕನ್ಯಾದಾನ ಮಾಡಿದರೆ ಇಹಪರಗಳಲ್ಲಿ ಸುಖವನ್ನು ಹೊಂದುವೆ. ಆ ಮುನಿ ಸದೃಶ ಬ್ರಾಹ್ಮಣನು ಸಂಸಾರಾಭಿಲಾಷೆಯಿಂದ ನಿನ್ನ ಮಗಳನ್ನು ಬಯಸಿ ಬರುತ್ತಿಲ್ಲ. ಪರಮ ವಿರಕ್ತನಾದ ಆ ಬ್ರಾಹ್ಮಣನು ಮುಂದೆ ತನ್ನ ವಂಶದಲ್ಲಿ ಓರ್ವ ಲೋಕೋದ್ಧಾರಕ ಮಹಾ ಮಹಿಮ ಪುರುಷನು ಅವತರಿಸುವನೆಂದು ತಿಳಿದು ಆ ಮಹಾನುಭಾವನ ಅವತಾರಕ್ಕೆ ಮುನ್ನುಡಿ ಬರೆಯಲು ಹಾಗೂ ತಾವು ತಮ್ಮ ಪಿತೃಋಣದಿಂದ ಮುಕ್ತರಾಗುವ ಏಕೈಕ ಉದ್ದೇಶದಿಂದ ನಿನ್ನಲ್ಲಿಗೆ ಬರುತ್ತಾರೆ. ಆದ್ದರಿಂದ ನಿನ್ನ ಮಗಳನ್ನು ಕೊಟ್ಟ ಪಕ್ಷದಲ್ಲಿ ನಿನಗೆ ಪರಮ ಮಂಗಲವಾಗುತ್ತದೆ. ನಿನ್ನ ಕುಲಕೋಟಿ ಉದ್ಧಾರವಾಗುತ್ತದೆ. ಇಲ್ಲದಿದ್ದರೆ ಆ ಮುನಿಯ ಘೋರ ಶಾಪಕ್ಕೆ ಗುರಿಯಾಗುತ್ತಿ . ನಾನು ಹೇಳಿದ ಮಾತುಗಳು ಸತ್ಯ ಎಂದು ಮೂರು ಬಾರಿ ಉಚ್ಚರಿಸಿ ಅಂತರ್ಧಾನನಾದನು. ಈ ಸ್ವಪ್ನದಿಂದ ನಾನು ಚಿಂತಿತನಾಗಿದ್ದೇನೆಂದು ಹೇಳಿದನು.

ರಾಜನ ಮಾತುಗಳನ್ನು ಕೇಳಿದ ಸಭಿಕರು ರಾಜನೇ ನಿನ್ನ ಸ್ವಪ್ನದಲ್ಲಿ ಬಂದ ಬ್ರಾಹ್ಮಣನು ಜಗದೊಡೆಯನಾದ ಶ್ರೀನಿವಾಸನೇ ಆಗಿದ್ದಾನೆ. ನಿನ್ನ ಮಗಳಿಗೆ ಯೋಗ್ಯ ವರನನ್ನು ಭಗವಂತನೇ ನಿಶ್ಚಯಿಸಿದ್ದಾನೆ. ಆದ್ದರಿಂದ ಕಿಂಚಿತ್ತೂ ಸಂದೇಹಿಸದೇ ನಿಶ್ಚಿತನಾಗಿ ನಿನ್ನ ಪುತ್ರಿಯನ್ನು ಆ ಬ್ರಾಹ್ಮಣನಿಗೆ ಕನ್ಯಾದಾನ ಮಾಡಿ ಕೃತಾರ್ಥನಾಗು ಎಂದು ಹೇಳಿದರು. ಈ ಮಾತುಗಳಿಂದ ನಿಶ್ಚಿಂತನಾದ ರಾಜನು ಮಗಳನ್ನು ಬ್ರಾಹ್ಮಣನಿಗೆ ಧಾರೆಯೆರೆಯಲು ನಿಶ್ಚಯಿಸಿದನು.

ಇಷ್ಟಾಗುವಲ್ಲಿಯೇ ಕಾಶಿನಾಥ ಶಾಸ್ತ್ರಿಗಳು ರಾಜನಲ್ಲಿಗೆ ಬಂದು ನಾವು ವಾಕ್ಯಾರ್ಥ ಮಾಡಿ ಜಯ ಪತ್ರಿಕೆ ಪಡೆಯಲು ಬಂದಿದ್ದೇವೆ ಎಂದು ತಿಳಿಸಿದರು. ಸ್ವಪ್ನಸೂಚಿತ ನಿರ್ದೇಶನದಂತೆ ನಿಶ್ಚಿಂತನಾದ ರಾಜನು ಆಗಬಹುದೆಂದು ಒಪ್ಪಿಗೆ ಸೂಚಿಸಿ ಚರ್ಚೆಗೆ ಏರ್ಪಾಡು ಮಾಡಿದನು. ಕಾಶಿನಾಥ ಶಾಸ್ತ್ರಿಗಳಿಗೂ ತಿರುಮಲಾಚಾರ್ಯರಿಗೂ ತತ್ವದ ನಿರ್ಣಯಕ್ಕಾಗಿ ಚರ್ಚೆ ಆರಂಭವಾಯಿತು. ವಾಕ್ಯಾರ್ಥದ ವಿಚಾರವನ್ನು ತಿಳಿದು ಕುತೂಹಲದಿಂದ ಬ್ರಾಹ್ಮಣರೂ ಪಂಡಿತರೂ ಪಾಮರರೂ ಅರಿತವರು, ಅರಿಯದವರೂ ಎಲ್ಲರೂ ಕುತೂಹಲದಿಂದ ಸೇರಿದ್ದರು. ನಾನೇ ದೇವರು, ಬ್ರಹ್ಮವೊಂದೇ ಸತ್ಯ . ಬೇರೆಲ್ಲ ಮಿಥ್ಯ. ಬ್ರಹ್ಮನಲ್ಲಿ ಕಲ್ಪಿತ (ಆರೋಪಿತ) ವಾದುದು ಎಂಬ ಅದ್ವೈತವಾದದ ಸಮರ್ಥಕ ಕಾಶಿನಾಥ ಶಾಸ್ತ್ರಿಯು ಒಂದೆಡೆಯಾದರೆ ಸರ್ವವ್ಯಾಪಿಯಾದ ಜಗನ್ನಿಯಾಮಕ ಸರ್ವೋತ್ತಮನಾದ ಸ್ವತಂತ್ರನಾದ ಭಗವಂತನೊಬ್ಬನಿದ್ದಾನೆ. ಅವನೊಬ್ಬನೇ ಸ್ವತಂತ್ರ . ಬೇರೆಲ್ಲರೂ ಅವನಿಂದಲೇ ಸತ್ತಾ, ಪ್ರತೀತಿ, ಪ್ರವೃತ್ತಿಗಳನ್ನು ಹೊಂದುವರು. ಅಷ್ಟೇ ಅಲ್ಲ ಮೋಕ್ಷದಲ್ಲೂ ಕೂಡ ಅವನಿಗೆ ದಾಸರಾಗಿರುತ್ತಾರೆ ಎಂಬ ತತ್ವ (ದ್ವೈತ)ದ ಸಮರ್ಥಕರಾದ ತಿರುಮಲಾಚಾರ್ಯರು ಮತ್ತೊಂದೆಡೆ.

ಭವ್ಯವೇಷ ಭೂಷಗಳನ್ನು ಧರಿಸಿ ಶಿಷ್ಯ ಮಂಡಳಿಯ ಜೈಕಾರದೊಡೆ ಬಂದು ಸಭೆಯಲ್ಲಿ ಆಸೀನನಾದ ಕಾಶೀನಾಥಶಾಸ್ತ್ರಿಯ ವೈಭವ, ಆಡಂಬರ ಏರುಧ್ವನಿ ಇತ್ಯಾದಿಗಳನ್ನು ಕಂಡ ಜನರೆಲ್ಲ ಕಾಶೀನಾಥ ಶಾಸ್ತ್ರಿಯ ಎದುರುಗಡೆ ಈ ಒಂಟಿಯಾದ ಬಡಬ್ರಾಹ್ಮಣನದ ಯೋಗ್ಯತೆ ಏನು. ಇವನ ಆಟ ಎಷ್ಟು ಹೊತ್ತು ನಡೆದೀತು. ಆದ್ದರಿಂದ ಶಾಸ್ತ್ರಿಯದೇ ಗೆಲುವು ನಿಶ್ಚಿತ ಎಂದು ಭಾವಿಸಿದರು. ತಿರುಮಲಾಚಾರ್ಯರ ನೈಜ ಯೋಗ್ಯತೆಯನ್ನರಿತವರು ತಿರುಮಲಾಚಾರ್ಯರೇ ಗೆಲ್ಲುವರೆಂಬ ದೃಢ ವಿಶ್ವಾಸದಿಂದ ಕುಳಿತಿದ್ದಾರೆ.

ಸಭಿಕರೆಲ್ಲ ಮೈಯೆಲ್ಲ ಕಣ್ಣಾಗಿ ಕುಳಿತಿರುವಂತೆಯೇ ವಾಕ್ಯಾರ್ಥವು ಆರಂಭವಾಯಿತು. ಅಲ್ಪ ಸಮಯದಲ್ಲಿಯೇ ಕಾಶೀನಾಥ ಶಾಸ್ತ್ರಿಯ ಜಗನ್ಮಿಥ್ಯಾ ವಾದವನ್ನು ನಿರಾಕರಿಸಿದ ತಿರುಮಲಾರ್ಯರು ಹರಿ ಸರ್ವೋತ್ತಮ ವಾಯು ಜೀವೋತ್ತಮ, ಪಂಚಭೇದ, ತಾರತಮ್ಯ , ಸತ್ಯವೆಂಬ ಶ್ರೀಮದಾಚಾರ್ಯರ ಅನಾದಿ ಸತ್ಸಂಪ್ರದಾಯ ಪರಂಪರಾಪ್ರಾಪ್ತ ವೈಷ್ಣವ ಸಿದ್ಧಾಂತವನ್ನೇ ಸ್ಥಿರವಾಗಿ ಸ್ಥಾಪಿಸಿಬಿಟ್ಟರು. ಇವರ ಮುಂದೆ ಕಾಶೀನಾಥನಂತಹ ದಿಗ್ದಂತಿ ಪಂಡಿತೋತ್ತಮನೂ ಶರಣಾಗಬೇಕಾಯಿತು. ವಿಜಯ ಧ್ವಜವನ್ನು ಹಾರಿಸಿದ ತಿರುಮಲಾಚಾರ್ಯರು

ಸಂಭಾವನಾ ರೂಪದಲ್ಲಿ ಕನ್ಯಾ ಭಿಕ್ಷೆಯನ್ನು ಬೇಡಿದರು. ಶರ್ಯಾತಿ ರಾಜನ ಮಗಳಾದ ಸುಕನ್ಯೆಯನ್ನು ಬೇಡಿದ ಚ್ಯವನ ಋಷಿಗಳನ್ನು ಜ್ಞಾಪಿಸುವಂತೆ ಇದ್ದರು ವಯೋವೃದ್ಧರಾದ ತಿರುಮಲಾಚಾರ್ಯರು. ಪಂಚರತ್ನಕಾರರು ಇವರನ್ನು ಮುನಿವಂಶ ಶೇಖರರೆಂದು ಸ್ತುತಿಸಿದ್ದಾರೆ. ಕನ್ನಡ ಪಂಚರತ್ನಕಾರರಾದ ವಿಷ್ಣುತೀರ್ಥರ ಸಾಕ್ಷಾತ್ ಶಿಷ್ಯರಾದ ಗೋಕಾವಿ ಭೀಮಾಚಾರ್ಯರು (ಅನಂತಾದ್ರೀಶ ಅಂಕಿತ) ಇವರನ್ನು ಸಾಕ್ಷಾತ್ ಚ್ಯವನ ಋಷಿಗಳೆಂದೇ ಹೇಳಿದ್ದಾರೆ. **ಪಂಚರತ್ನ ಪ್ರಥಮರತ್ನ 33 ನೇ ಶ್ಲೋಕ ಕನ್ನಡ ಪಂಚರತ್ನ.**

ಈಗಾಗಲೇ ಸ್ವಪ್ನ ಸೂಚಿತನಾಗಿದ್ದರೂ ಕೂಡ ಆಚಾರ್ಯರ ವಾರ್ಧಕ್ಯವನ್ನು ನೋಡಿ ಸಂಶಯದಿಂದ ನರಸಿಂಹ ಭೂಪಾಲನನ್ನು ಕುರಿತು ತಿರುಮಲಾಚಾರ್ಯರು ಅಭಯ ನೀಡಿದರು. ರಾಜನೇ ನಾನು ವೃದ್ಧನಾಗಿರುವೆನೆಂದು ಚಿಂತಿಸಬೇಡ. ಈ ವಿವಾಹವು ಒಂದು ಮಹತ್‌ಕಾರ್ಯಕ್ಕಾಗಿ ಶ್ರೀ ಹರಿಯ ಸಂಕಲ್ಪದಂತೆ ನಡೆಯುತ್ತಿದೆ. ನಿನ್ನ ಮಗಳಲ್ಲಿ ಋಷಿ ಸಮಾನರಾದ ನಾಲ್ವರು ಪುತ್ರರು ಹಾಗೂ ರತಿಯಂತಹ ಸೌಂದರ್ಯವುಳ್ಳ ಓರ್ವ ಪುತ್ರಿ ಜನಿಸುತ್ತಾಳೆ, ಎಂದು ರಾಜನ ಚಿಂತೆಯನ್ನು ದೂರ ಮಾಡಿದರು. ಆಚಾರ್ಯರ ಮಾತಿನಿಂದ ನಿಶ್ಚಿಂತನಾದ ರಾಜನು ತಿರುಮಲಾಚಾರ್ಯರಿಗೆ ತನ್ನ ರಾಜ ಗಾಂಭೀರ್ಯಕ್ಕೆ ಅನುಗುಣವಾಗಿ ಸಾಲಂಕೃತ ಕನ್ಯಾದಾನ ಮಾಡಿ ಕೃತಕೃತ್ಯನಾದನು.

ತಮ್ಮ ಮನದ ಚಿಂತೆ ಇಷ್ಟು ಬೇಗ ಪರಿಹಾರವಾದುದರಿಂದ ಸಂತುಷ್ಟ ಚಿತ್ತರಾದ ತಿರುಮಲಾಚಾರ್ಯರು ಪತ್ನೀ ಸಮೇತರಾಗಿ ಮನೆಗೆ ಹಿಂದಿರುಗಿ ತಮ್ಮ ಸ್ವಗೃಹದಲ್ಲಿ ನೆಲೆಸಿದರು. ಭಗವಂತನ ಸಂಕಲ್ಪದಂತೆ ಒದಗಿಬಂದ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಗೃಹಸ್ಥಾಶ್ರಮೋಚಿತ ಆಚಾರಗಳನ್ನು ತಪ್ಪದೇ ಪಾಲಿಸುತ್ತ 'ಧನ್ಯೋಗ್ರಹಸ್ಥಾಶ್ರಮಃ' ಎಂಬ ಉಕ್ತಿಗೆ ನಿದರ್ಶನರಾಗಿ ಜೀವಿಸುತ್ತಿದ್ದರು.

ಈ ರೀತಿಯಾಗಿ ಸ್ವವಿಹಿತ ವೃತ್ತಿಯಿಂದ ಭಕ್ತಿಯುಕ್ತರಾಗಿ ಭಗವದಾರಾಧನಾ ರೂಪವಾದ ಪರಮ ಧರ್ಮವನ್ನು ಪಾಲಿಸುತ್ತಿದ್ದ ತಿರುಮಲಾಚಾರ್ಯರು ವತ್ಸರ ಕ್ರಮದಿಂದ ನಾಲ್ಕು ಜನ ಸುಪುತ್ರರನ್ನು ಓರ್ವ ಸುಪುತ್ರಿಯನ್ನು ಪಡೆದು ಪಿತೃಋಣದಿಂದ ಮುಕ್ತನಾದೆನೆಂಬ ಸಂತಸವನ್ನು ಹೊಂದಿದರು. ಇನ್ನೂ ಹೆಚ್ಚಾಗಿ ಭಗವಂತನ ಆರಾಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು.

# ಅವತಾರ ಹಿನ್ನೆಲೆ

ತ್ರಿಕಾಲ ಜ್ಞಾನಿಗಳಾಗಿದ್ದ ತಿರುಮಲಾಚಾರ್ಯರಿಗೆ ಮುಂದಿನ ಘಟನೆಗಳು ತಿಳಿಯದವುಗಳಾಗಿರಲಿಲ್ಲ. ಅವರ ದೃಷ್ಟಿಗೆ ಮುಂದಿನ ಭವಿಷ್ಯ ಸ್ಪಷ್ಟವಾಗಿತ್ತು. ನಾಳಿನ ಅರಿವು ಆಚಾರ್ಯರಿಗಾಗಿತ್ತು. ಒಂದು ದಿನ ಧ್ಯಾನದಲ್ಲಿದ್ದ ಆಚಾರ್ಯರಿಗೆ ಟೀಕಾಕೃತ್ಪಾದರ ವಿಚಾರ ಲಹರಿ ಸ್ಪಷ್ಟವಾಯಿತು.

ಟೀಕಾಚಾರ್ಯರ ಯೋಚನಾ ಲಹರಿ ಹೀಗಿತ್ತು. ಕಲಿಯ ಬಲದಿಂದ ಸುಮಂದಮತಿಗಳಾದ, ಅಲ್ಪಪುಣ್ಯವುಳ್ಳವರಾದ, ಅನೇಕ ರೀತಿಯ ಉಪದ್ರವಗಳಿಂದ ಯುಕ್ತರಾದ ಕಾರಣ ಆನಂದತೀರ್ಥರ ಶಾಸ್ತ್ರವೆಂಬ ಅಮೃತ ಸುಧಾ ಸಮುದ್ರದಲ್ಲಿ ಮುಳುಗಿ ರಸಪಾದ ಮಾಡಲಾಗದ ಅಶಕ್ತ ಸುಧಾಸಕ್ತರಿಗೋಸುಗ ಅಗಾಧವೂ ಗಂಭೀರವೂ ಆದ ಶ್ರೀಮನ್ನ್ಯಾಯಸುಧೆಯನ್ನು ನಿರ್ಮಾಣ ಮಾಡಿದೆವು. ಈ ಸುಧೆಯ ಮಹಿಮೆಯನ್ನು ಬಲ್ಲವರೇ ಬಲ್ಲರು. (ವಿಷ್ಣುತೀರ್ಥರೇ ತಮ್ಮ ನ್ಯಾಯಸುಧಾ ಸ್ತೋತ್ರದಲ್ಲಿ ಅನಂತ ಜನ್ಮಗಳಲ್ಲಿ ತಪಸ್ಸು ಮಾಡಿ ಪಡೆಯಲಾಗದ ಉಪರತತ್ವವು ಶ್ರೀಮನ್ನ್ಯಾಯಸುಧಾ ಗ್ರಂಥದ ಒಂದು ಪದದಲ್ಲಿ ಪ್ರವಣನಾದವನಿಗೆ ಸುಲಭವಾಗಿ ದೊರಕುತ್ತದೆ. ಜಯತೀರ್ಥರ ಕೃತಿಗಳಲ್ಲಿ (ಸುಧೆಯಲ್ಲಿ) ಪ್ರಾವೀಣ್ಯ ಸಂಪಾದನೆ ಮಾಡಿದವನು ಮತ್ತೆ ಹುಟ್ಟಿ ಬರುವುದಿಲ್ಲ. ಅಷ್ಟೇ ಅಲ್ಲ ಅತ್ಯಂತ ದುರ್ಲಭವಾದ ಮೋಕ್ಷವನ್ನೇ ಹೊಂದುತ್ತಾನೆ ಎಂದು ಹೇಳಿದ್ದಾರೆ). ಇಂಥ ಸುಧಾ ಗ್ರಂಥವು ಇಲ್ಲಿಯವರೆಗೆ ಪರಂಪರಾಗತವಾಗಿ ನಮ್ಮ ಅನುಗ್ರಹದಿಂದ ಪಡೆದ ವಿಶೇಷ ಬುದ್ಧಿಯುಳ್ಳ, ಗುರುಮುಖೇನ ಸುಧಾ ಅಧ್ಯಯನ ಮಾಡಿದ ಪಂಡಿತರುಗಳಿಂದ ಸುಧೆಯ ಅಂತರಾರ್ಥವು ಸಜ್ಜನರಿಗೆ ಬೋಧಿಸಲ್ಪಟ್ಟಿತು.

ಆದರೆ ಈಗ ಶ್ರೀಮನ್ನ್ಯಾಯಸುಧೆಯ ಭಾವವು ಕರ್ಕಶ ತರ್ಕದ ಪರಿಷ್ಕಾರಗಳ ಮಧ್ಯದಲ್ಲಿ ನಲುಗಿದೆ. ಅಗಾಧ ಶಬ್ದ ಶಾಸ್ತ್ರದ ಗಹನ ಚರ್ಚೆಯಲ್ಲಿ ಸುಧೆಯ ಆಂತರ್ಯವು ತೋರದಾಗಿದೆ. ಪ್ರೌಢವಾದ ಮೀಮಾಂಸಾ ಶಾಸ್ತ್ರದ ಪ್ರಕ್ರಿಯೆಗಳ ಮಧ್ಯದಲ್ಲಿ ಸುಧಾರ್ಥವು ದೂರವಾಗಿದೆ. ಅನ್ಯ ಶಾಸ್ತ್ರಗಳ ಪ್ರಭಾವದಿಂದ ಪ್ರೇರಿತ ಮನಸ್ಸುಳ್ಳ ಕೆಲವರು ಕೇವಲ ವಾಕ್ಯಾರ್ಥದಲ್ಲೇ ಪರ್ಯವಸಾನ ಮಾಡಿ, ಸುಧೆಯ ನಿಜವಾದ ಭಾವವನ್ನು ಮರೆ ಮಾಚುತ್ತಿದ್ದಾರೆ. ಆದ್ದರಿಂದ ನಿಜವಾದ ಸಜ್ಜನರ ಉದ್ಧಾರದ ಇಚ್ಛೆಯಿಂದ ನಿರ್ಮಾಣ ಮಾಡಿದ ಸುಧೆಯು ಇದ್ದೂ ಇಲ್ಲದಂತಾಗಿದೆ.

ಇಂಥ ಸುಧೆಯ ನಿಜಾರ್ಥವನ್ನು ಜಗತ್ತಿಗೆ ತಿಳಿಸಲು ನಮ್ಮಿಂದಲೇ ಸುಧೆಯ ಅಂತರಾರ್ಥವನ್ನು ಅರಿತ ಶಿಷ್ಯನೊಬ್ಬನ ಅವತಾರವಾಗಬೇಕು. ಅಂದರೆ ಮಾತ್ರ ಸುಧೆಯ ಅಂತರಾರ್ಥ ಮುಮುಕ್ಷುಗಳಿಗೆ ತಿಳಿಯಲು ಸಾಧ್ಯ ಎಂದು ಚಿಂತಿಸಿದ ಟೀಕಾಚಾರ್ಯರು ತಮ್ಮಲ್ಲಿ ಅಧ್ಯಯನ ಮಾಡಿದ ಶಿಷ್ಯನೊಬ್ಬನಿಗೆ ಆದೇಶ ನೀಡಿದರು. ಧರೆಯ ಭೂಸುರರೆಲ್ಲ ತಮ್ಮ ಬೊಗಸೆಯಲ್ಲಿ ದೊರಕುವ ಸುಧಾರಸವನ್ನು ಪಾನಮಾಡಿ ಭಗವಂತನಲ್ಲಿ ಅಚಲವಾದ ಭಕ್ತಿಯನ್ನು ಪಡೆಯಬೇಕು. ಅದು ನಿನ್ನಿಂದ ಆಗಬೇಕಾಗಿದೆ. ನಮ್ಮಿಂದಲೇ ಸುಧೆಯನ್ನು ಸವಿದ ನೀನು ಭೂಮಿಯಲ್ಲಿ ಅವತರಿಸಿ ಸಜ್ಜನರಿಗೆ ಸುಧಾಪಾನ ಮಾಡಿಸಿ ಸಂಸಾರವೆಂಬ ಮೃತ್ಯುಪಾಶದಲ್ಲಿ ಸಿಲುಕಿದ ಸಜ್ಜನರನ್ನು ಸ್ವರೂಪ ಸುಖವನ್ನು ಹೊಂದಿ ನಿತ್ಯಾನಂದರಲ್ಲಿ ತೇಲುವಂತೆ ಮಾಡಬೇಕು. ಅದಕ್ಕಾಗಿ ನೀನು ಭೂಮಿಯಲ್ಲಿ ಅವತರಿಸಬೇಕಾಗಿದೆ. ನೀನು ಅವತರಿಸಲು ಯೋಗ್ಯ ಕ್ಷೇತ್ರವೆಂದರೆ ತಿರುಮಲಾಚಾರ್ಯರ ವಂಶವು. ಶೀಘ್ರದಲ್ಲಿಯೇ ತಿರುಮಲಾಚಾರ್ಯರ ವಂಶದಲ್ಲಿ ಅವತರಿಸಿ ಸುಜನರನ್ನು ಉದ್ಧರಿಸು. ನಿನ್ನೆಲ್ಲ ಕಾರ್ಯಗಳಿಗೆ ಶ್ರೀಮನ್ನ್ಯಾಯಸುಧಾ ಗ್ರಂಥವೇ ಸ್ಫೂರ್ತಿಯಾಗಲಿ. ನನ್ನ ಪೂರ್ಣಾನುಗ್ರಹ ನಿನ್ನ ಮೇಲಿದೆ ಎಂದು ಆಶೀರ್ವದಿಸಿದರು.

## ತಂದೆ ತಾಯಿಗಳು

ತಮಗೆ ಕನ್ಯಾದಾನ ನೀಡುವ ಸಂದರ್ಭದಲ್ಲಿ ರಾಜ ನೃಸಿಂಹಭೂಪಾಲನಿಗೆ ತಿರುಮಲಾಚಾರ್ಯರು ಹೇಳಿದ ಮಾತಿನಂತೆ ಅವರಿಗೆ ಬಾಳಾಚಾರ್ಯ, ನರಹರಿ ಆಚಾರ್ಯ, ಶೇಷಾಚಾರ್ಯ, ಶ್ರೀನಿವಾಸಾಚಾರ್ಯ ಎಂಬ ನಾಲ್ವರು ಪುತ್ರರು, ಓರ್ವ ಪುತ್ರಿ ಜನಿಸಿದರು. ಇವರಲ್ಲಿ ತಿರುಮಲಾಚಾರ್ಯರ ಹಿರಿಯ ಮಕ್ಕಳಾದ ಬಾಳಾಚಾರ್ಯರು ಹಾಗೂ ಅವರ ಧರ್ಮ ಪತ್ನಿ ಭಾಗೀರಥಿಬಾಯಿಯವರೇ ವಿಷ್ಣುತೀರ್ಥರ ತಂದೆ ತಾಯಿಗಳು.

ತಮ್ಮ ವಂಶದಲ್ಲೇ ಜಯತೀರ್ಥರಿಂದ ಆಜ್ಞಪ್ತನಾದ ದೇವಾಂಶ ಸಂಭೂತನಾದ ಅವರ ಶಿಷ್ಯನೊಬ್ಬನು ಅವತರಿಸುವನೆಂದು ಅರಿತ ತಿರುಮಲಾಚಾರ್ಯರಿಗೆ ಪರಮಾನಂದವಾಯಿತು. ಭಗವಂತನು ತಮ್ಮ ಮೇಲೆ ಮಾಡಿದ ಪರಮಾನುಗ್ರಹವನ್ನು ನೆನೆದು ಆನಂದ ತುಂದಿಲರಾದರು. ಸಂತಸದ ಭಾರವನ್ನು ತಾಳಲಾಗದೆ ಆನಂದದಿಂದ

ವರ್ತಿಸಿದರು. ಕಂಗಳಲ್ಲಿ ತುಂಬಿದ ಭಾಷ್ಪಗಳನ್ನು ಕೈಗಳಿಂದ ಒರೆಸಿ ಭಗವಂತನ ಗುಣಗಾನವನ್ನು ಮಾಡುತ್ತ ತಿರುಮಲಾಚಾರ್ಯರು ಮನದಲ್ಲಿಯೇ ಚಿಂತಿಸಿದರು.

ಇಂದು ನನ್ನ ಮೇಲೆ ಭಗವಂತನ ಕೃಪೆಯಾಯಿತು. ನನ್ನ ಪೂರ್ವಾರ್ಜಿತ ಪುಣ್ಯವೆಲ್ಲ ಇಂದು ಫಲಿಸಿತು. ನಮ್ಮ ಪಿತೃಗಳ ಪುಣ್ಯ ಇಂದು ಸಾರ್ಥಕವಾಯಿತು. ಪ್ರಪಂಚಕ್ಕೇ ಸುಧಾರಸಪಾನ ಮಾಡಿಸುವ ಭಾಗವತವನ್ನು ವಿನೂತನವಾಗಿ ವ್ಯಾಖ್ಯಾನಿಸುವ ಪರಮ ಭಾಗವತೋತ್ತಮನ ಅವತಾರ ಈ ವಂಶದಲ್ಲಿ ಆಗುತ್ತದೆ ಎಂದ ಮೇಲೆ ಈ ವಂಶದ ಹಿಂದಿನ ಮತ್ತು ಮುಂದಿನವರ ಭಾಗ್ಯವನ್ನೇನು ವರ್ಣಿಸುವುದು. ಈ ರೀತಿಯಾಗಿ ಮನದಲ್ಲಿಯೇ ಸಂತೋಷಿಸುತ್ತ ತಿರುಮಲಾಚಾರ್ಯರು ಆನಂದ ಮಗ್ನರಾದರು.

ಹಿರಿಯ ಸುಪುತ್ರ ಬಾಳಾಚಾರ್ಯರ ಧರ್ಮಪತ್ನಿಯಾದ ಭಾಗೀರಥಿಯು ಮಾವನಿಗೆ ತಕ್ಕ ಸೊಸೆ. ಪತಿಗೆ ಯೋಗ್ಯಳಾದ ಸತಿ. ಧರ್ಮಪರಾಯಣೆ, ಗುರು ಶುಶ್ರೂಷಣಾರತಳಾದ ಆಕೆ ವೃದ್ಧರಾದ ಮಾವ ತಿರುಮಲಾಚಾರ್ಯರನ್ನು ಭಕ್ತಿಯಿಂದ ನಿರಂತರ ಸೇವಿಸಿದಳು. ''ಉದಯ ಕಾಲದಲ್ಲೆದ್ದು ಉದಯರಾಗವ ಪಾಡಿ'' ರಂಗವಲ್ಲಿಯನ್ನಿಟ್ಟು ಮೂಡಿಬರುವ ಸೂರ್ಯಾಂತರ್ಗತ ನಾರಾಯಣನನ್ನು ಭಕ್ತಿಯಿಂದ ಸ್ವಾಗತಿಸಿ, ಮಾವನವರಿಗೆ ಸ್ನಾನ ಮಾಡಿಸುವುದು ಅವರ ನಿತ್ಯ ಕರ್ಮಗಳಿಗೆ ಅನುಕೂಲ ಮಾಡಿ ಕೊಡುವುದು. ಸ್ವತಃ ಅವರಿಗೆ ಇಷ್ಟವಾದ ಭೋಜನವನ್ನು ತಯಾರಿಸಿ, ಬಡಿಸಿ ಊಟ ಮಾಡಿಸುವುದು. ರಾತ್ರಿ ಮಲಗುವ ವೇಳೆಯಲ್ಲಿ ಪಾದ ಸಂವಹನ ಮಾಡಿ ಅವರು ಮಲಗಿದ ನಂತರ ಮಲಗುವುದು ಹಾಗೂ ಅವರು ಏಳುವ ಮೊದಲೇ ಎದ್ದು ಅವರ ಸೇವೆಗೆ ಸಿದ್ಧಳಾಗುತ್ತಿದ್ದಳು. ವೃದ್ಧ ಮಾವನ ಸೇವೆಯನ್ನೇ ಭಗವಂತನ ಸೇವೆಯೆಂದು ಭಾವಿಸಿ ನಿರಂತರ ಸೇವಿಸಿದಳು. ಸೊಸೆಯ ಸದ್ಗುಣ ಸದಾಚಾರಗಳಿಂದ ಪ್ರೀತರಾದ ತಿರುಮಲಾಚಾರ್ಯರು ಸೊಸೆಯಲ್ಲಿ ಪ್ರೀತರಾದರು ಒಂದು ದಿನ ಸೊಸೆಯನ್ನು ಕರೆದು ಹೇಳಿದರು.

ಭಾಗೀರಥಿಯೇ ನಿನ್ನ ಸೇವೆಯಿಂದ ನಾನು ಪ್ರೀತನಾಗಿದ್ದೇನೆ. ನೀನು ನಿಜವಾಗಿಯೂ ಧನ್ಯಳು. ನಿನಗೊಂದು ಅಲಭ್ಯವಾದ ವರವನ್ನು ನೀಡುತ್ತೇನೆ. ಪತಿವ್ರತೆಯೂ ಸದಾಚಾರ ಸಂಪನ್ನೆಯೂ ಆದ ನಿನ್ನಲ್ಲಿ ಮಹಾ ಪುರುಷನೊಬ್ಬನ ಅವತಾರವಾಗುತ್ತದೆ. ಟೀಕಾಚಾರ್ಯರ ಅನುಗ್ರಹದಿಂದ ಅವತರಿಸಿದ ಆತನು ಏಕಾಂತ ಭಕ್ತನೂ ವೈರಾಗ್ಯ ಭೂಷಿತನೂ, ಮಹಾಜ್ಞಾನಿಯೂ ಅನೇಕ ಸದ್ಗುಣಗಳಿಂದ ಯುಕ್ತನೂ ಆಗುತ್ತಾನೆ.

ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರನಾದ ನಿನ್ನ ಪುತ್ರನು ವಂಶದ ಕೀರ್ತಿಯನ್ನು ಬೆಳಗಿಸುವ ಚಂದ್ರನಂತೆ ಬೆಳಗುತ್ತಾನೆ. ನಿನಗೊಂದು ವಿಷಯವನ್ನು ಹೇಳುತ್ತೇನೆ ಕೇಳು.

ನೀನು ತುಂಬು ಗರ್ಭಿಣಿಯಾಗಿರುವಾಗ ಟೀಕಾರ್ಯರು ಸರ್ಪರೂಪದಲ್ಲಿ ನಿನ್ನ ತಲೆಯ ಪಾರ್ಶ್ವದಲ್ಲಿ ಕಾಣಿಸಿಕೊಂಡು ನಿನಗೆ ಸೂಚನೆ ನೀಡುತ್ತಾರೆ. ಯಾರ ಅನುಗ್ರಹದಿಂದ ನಿನ್ನ ಮಗನು ಜನಿಸುತ್ತಾನೋ ಅವರ ಹೆಸರನ್ನೇ ನಿನ್ನ ಮಗನಿಗೆ ಇಡಬೇಕು ಎಂದು ನುಡಿದರು. ಮಾವನವರ ಮಾತುಗಳಿಂದ ರೋಮಾಂಚಿತಳಾದ ಭಾಗೀರಥಿಯು ಧನ್ಯತೆಯಿಂದ ಮಾವನವರ ಪಾದಗಳಿಗೆ ನಮಸ್ಕರಿಸಿ ಕಣ್ಣೊತ್ತಿಕೊಂಡಳು.

## ಭೂಮಿಗೆ ಬಂದ ಭಾಗವತ

ಮಾವನವರ ಆಶೀರ್ವಾದ, ತನ್ನ ಪುಣ್ಯಫಲ ಟೀಕಾಚಾರ್ಯರ ಅನುಗ್ರಹಗಳಿಂದ ಕಾಲಕ್ರಮದಲ್ಲಿ ಭಾಗೀರಥಿಯು ಗರ್ಭಿಣಿಯಾದಳು. ಗರ್ಭವತಿಯಾದ ಅವಳಿಗೆ ಅತಿ ಉತ್ತಮ ಬಯಕೆಗಳಾದವು. ನಿರಂತರ ಭಾಗವತಾದಿ ಶಾಸ್ತ್ರಗಳ ಶ್ರವಣ, ಗುರುಹಿರಿಯರ ಸೇವೆ, ನಿರಂತರ ಭಗವಂತನ ಸ್ಮರಣೆ, ಇತ್ಯಾದಿಗಳಲ್ಲಿ ತನ್ನನ್ನು ತೊಡಗಿಸಿಕೊಂಡಳು. ಗರ್ಭಿಣಿಯಾದ ಭಾಗೀರಥಿಯು ಅಪೂರ್ವ ಲಕ್ಷಣಗಳಿಂದ ಭೂದೇವಿಯ ಸೌಂದರ್ಯವನ್ನು ನಾಚಿಸಿದಳು. ತನ್ನುದರದಲ್ಲಿ ಟೀಕಾಚಾರ್ಯರ ಅನುಗ್ರಹದಿಂದ ಮಹಿತಾತ್ಮನೊಬ್ಬನು ಜನಿಸುವನೆಂದು ತಿಳಿದ ಆಕೆ ಅತ್ಯಂತ ಸಂಭ್ರಮದಿಂದ ಕಂದನನ್ನು ಎದುರು ನೋಡುತ್ತಿದ್ದಳು. ಉತ್ತಮ ಗರ್ಭ ಲಕ್ಷಣಗಳುಳ್ಳ ಅವಳಿಗೆ ಯಥೋಚಿತವಾಗಿ ಪುಂಸವನ ಇತ್ಯಾದಿ ಕರ್ಮಗಳು ನಡೆದವು. ಹೀಗಿರಲು ಒಂದು ದಿನ ಪಂಚರತ್ನದಲ್ಲಿ ಹೇಳಿದಂತೆ ''**ಸಮೇತ್ಯ ಹರ್ಷಾತ್ ಸುತಗರ್ಭರತ್ನಂ ಸ್ವತೇಜಸಾ ನಿರ್ಜಿತ ರತ್ನಗರ್ಭಾಮ್ ಫಣೀಂದ್ರರಾಜೋ ವಿಜಹಾರ ತತ್ರ ತದುತ್ತಮಾಂಗೋಪರಿ ಭಾಗಭಿತ್ತೌ**'' ಟೀಕಾಚಾರ್ಯರು ಸರ್ಪ ರೂಪದಿಂದ ಆಕೆಗೆ ದರ್ಶನವಿತ್ತರು. ಅವಳ ತಲೆಯ ಮೇಲ್ಭಾಗದಲ್ಲಿ ಹೆಡೆ ತೆಗೆದು ಆಡಿದ ಸರ್ಪವು, ಅವಳ ನಡು ನೆತ್ತಿಯ ಮೇಲಾಡಿತು. ಅನಂತಾದ್ರೀಶರು ಕನ್ನಡ ಪಂಚರತ್ನದಲ್ಲಿ ವರ್ಣಿಸಿದಂತೆ ''**ಸಡಗರದಿಂದಿರುತಿರಲು ಪೊಡವಿಪೊತ್ತವನು ಬಂದಡರಿದನಾಕೆಯ ನಡುವಾದ ನೆತ್ತಿಯೊಳು ಹೆಡೆಯ ತೆಗೆದು ಭೋಯಾಡುವ ಸಮಯದಿ ಗಡಬಡಿಸಿದಳು ನೋಡಿ**''. ನೆತ್ತಿಯ ಮೇಲಾಡುವ ಫಟ ಸರ್ಪದ ದರ್ಶನದಿಂದ ಗಡಬಡಿಸಿದಳು ಆದರೂ

ಮಾವನವರು ಹೇಳಿದ ಮಾತನ್ನು ನೆನಪಿಸಿಕೊಂಡು ಧೈರ್ಯ ತಂದುಕೊಂಡಳು. ''ಕೈಮುಗಿದು ಬೇಡಿಕೊಳ್ಳಮ್ಮಾ, ಬಂದ ಭಯವ ನೀಬಿಟ್ಟು ಛಂದದಿ ಸಂಭ್ರಮ ತ್ವರದಿ ಕ್ಷೀರ ಮುಂದಿಟ್ಟು' ಎಂದು ನೆರೆದ ಜನರು ಹೇಳಿದ ಮಾತನ್ನು ಕೇಳಿದ ಭಾಗೀರಥಿಯು ಬಟ್ಟಲಲ್ಲಿ ಕರೆದ ಹಾಲನ್ನಿಟ್ಟು ಮನಸ್ಸಿನಲ್ಲೇ ಸರ್ಪವನ್ನು ಪೂಜಿಸಿ ಭಕ್ತಿಯಿಂದ ನಮಸ್ಕರಿಸಿದಳು ''ಸುಗಂಧ ಸಂಪೂರಿತ ಮಂದಿರಾಂತರಮ್'' ಎಂದು ಹೇಳಿದಂತೆ ಸರ್ಪದ ಮೈಯ ಸುಗಂಧದಿಂದ ಮನೆಯೆಲ್ಲ ತುಂಬಿ ಹೋಗಿತ್ತು. ಈ ರೀತಿಯ ಅಲೌಕಿಕ ಸುಗಂಧದಿಂದಲೇ ಅಲ್ಲಿಗೆ ಬಂದಿದ್ದು ಸಾಮಾನ್ಯ ಸರ್ಪವಲ್ಲ. ಸಾಕ್ಷಾತ್ ಟೀಕಾಚಾರ್ಯರೇ ಸರ್ಪರೂಪದಿಂದ ಆಗಮಿಸಿದ್ದಾರೆ ಎಂದು ಎಲ್ಲರೂ ನಿಶ್ಚಯಿಸಿಕೊಂಡರು. ಹೆಡೆಬಿಟ್ಟು ವಿಹರಿಸುತ್ತಿದ್ದ ಸರ್ಪರಾಜನು ಕೂಡ ನಿವೇದಿಸಿದ ಕ್ಷೀರವನ್ನು ಸ್ವೀಕರಿಸಿ ಅಲ್ಲಿಯೇ ಅದೃಶ್ಯನಾದನು. (''**ಪ್ರಾಪ್ತಕ್ಷೀರಪಾನ ಮಾಡಿ ದೀಪ್ತಫಣಿಪನು ಪ್ರಾಪ್ತಜನರು ನೋಡುತಿರಲು ಗುಪ್ತನಾದನು**'').

ಸ್ವಲ್ಪ ಸಮಯದಲ್ಲಿಯೇ ಸರ್ಪವು ಬಂದುಹೋದ ಸುದ್ದಿ ಊರಿಗೆಲ್ಲಾ ತಿಳಿದು ಹೋಗಿತ್ತು. ಸರ್ಪವು ಬಂದ ಸಮಯದಲ್ಲಿ ಬಾಳಾಚಾರ್ಯರು ಮನೆಯಲ್ಲಿರಲಿಲ್ಲ. ಮನೆಗೆ ಬಂದ ನಂತರ ಪತ್ನಿಯಿಂದ ವಿಷಯ ತಿಳಿದು ಅಚ್ಚರಿಗೊಂಡರು. ಲೋಕದಲ್ಲಿ ಗರ್ಭಿಣಿಯರಿಗೆ ಸರ್ಪದರ್ಶನವಾದರೆ ಅದೊಂದು ಒಳ್ಳೆಯ ಶಕುನವೆಂದು ಭಾವಿಸುವುದಿಲ್ಲ. ಆದರೆ ಟೀಕಾಚಾರ್ಯರೇ ಸರ್ಪರೂಪದಿಂದ ಬಂದು ಗರ್ಭಿಣಿಗೆ ಅನುಗ್ರಹಿಸುವರೆಂಬ ತಂದೆಯಾದ ತಿರುಮಲಾಚಾರ್ಯರ ಮಾತನ್ನು ಪತ್ನಿಯಿಂದ ಕೇಳಿ ತಿಳಿದಿದ್ದ ಬಾಳಾಚಾರ್ಯರು ಮಾತ್ರ ಇದೊಂದು ದೈವಕೃಪೆಯೇ ಸರಿ, ಟೀಕಾರಾಯರೇ ತಮ್ಮ ಅನುಗ್ರಹವನ್ನು ಈ ರೀತಿ ತೋರಿದ್ದಾರೆ ಎಂದು ಭಾವಿಸಿ ಆನಂದಿಸಿದರು. ಜಯತೀರ್ಥರ ಮಹಿಮೆಯನ್ನು ಚಿಂತಿಸುತ್ತ ಅವರು ತಮ್ಮ ಮೇಲೆ ಮಾಡಿದ ಅನುಗ್ರಹವನ್ನು ನೆನೆದು ರೋಮಾಂಚಿತರಾದರು.

ಟೀಕಾಚಾರ್ಯರ ವಿಶೇಷಾನುಗ್ರಹ ಪಾತ್ರಳಾದ ಭಾಗೀರಥಿಯ ಮುಖದಲ್ಲಿ ದೈವೀಕಳೆ ಕಂಗೊಳಿಸಿತು. ಸಾಧನೆಯ ದಾರಿ ಕಾಣದೇ ತೊಳಲುವ ಅಸಂಖ್ಯಾತ ಸುಜೀವಿಗಳಿಗೆ ದಾರಿತೋರಿಸುವ ದಿವ್ಯ ಜ್ಯೋತಿಯೊಂದು ಒಡಲಲ್ಲಿ ನೆಲೆಸಿದ ಪರಿಣಾಮ ಆಕೆಯ ಕಣ್ಣುಗಳು ವಿಶೇಷ ತೇಜಸ್ಸಿನಿಂದ ಕಂಗೊಳಿಸಿದವು. ''**ಏಹಿ ಮಾನಸ ಮಂದಿರಾಂಗಣ ದೇಶಮೀಶ ನಮೋಸ್ತುತೇ**'' ಎಂದು ಪ್ರಾರ್ಥಿಸಿದ ಮಾನಸ ಪೂಜಾ ಧುರಂಧರ ತನ್ನುದರದಲ್ಲಿ ನೆಲೆಸಿದ ಪರಿಣಾಮ ಆಕೆಯ ಮನೋಮಂದಿರವು ಹರಿ ಮಂದಿರದಂತೆ ಶೋಭಾಯಮಾನವಾಯಿತು. ತಪಸ್ವಿ ಪ್ರವರರಾದ ಮಾವನವರ

ಆಶೀರ್ವಾದ ಹಾಗೂ ಸರ್ವಜ್ಞಕಲ್ಪರಾದ ಜಯಾರ್ಯರ ಅನುಗ್ರಹ ಅವಳಿಗೆ ಬೆಂಗಾವಲಾಗಿ ಗರ್ಭಿಣಿಯ ಆಯಾಸವನ್ನು ಮರೆಸಿ ಇನ್ನಷ್ಟು ಧರ್ಮ ಕಾರ್ಯಗಳಲ್ಲಿ ತೊಡಗಲು ಚೈತನ್ಯ ತುಂಬಿದವು. ಈ ರೀತಿಯಾಗಿ ಸಂತುಷ್ಟ ಚಿತ್ತಳಾದ ಭಾಗೀರಥಿಯು ಕಂದನ ಆಗಮನವನ್ನು ಚಾತಕ ಪಕ್ಷಿಯಂತೆ ಕಾತರದಿಂದ ನಿರೀಕ್ಷಿಸತೊಡಗಿದಳು.

ಸೊಸೆಯಾದ ಭಾಗೀರಥಿಯು ಗರ್ಭಿಣಿಯಾದ ಕಾಲದಲ್ಲೇ ತಮ್ಮ ವಯೋಮಿತಿಗನುಗುಣವಾಗಿ ತಿರುಮಲಾಚಾರ್ಯರು ಇಹಲೋಕ ತ್ಯಜಿಸಿದರು. ಇದರಿಂದ ಭಾಗೀರಥಿಯು ಅತ್ಯಂತ ದುಃಖಿತಳಾದಳು. ಮಾವನವರನ್ನು ತಂದೆಗಿಂತಲೂ ಹೆಚ್ಚಾಗಿ ಸೇವಿಸುತ್ತಿದ್ದ ಭಾಗೀರಥಿಯು ಮಾವನವರ ವಾತ್ಸಲ್ಯವನ್ನು ನೆನೆದು ಗದ್ಗದಿತಳಾದಳು.

ಅಲ್ಲಿಯವರೆಗೆ ಎಲ್ಲರೂ ಒಂದೇ ಮನೆಯಲ್ಲಿ ವಾಸ ಮಾಡುತ್ತಿದ್ದರು. ಆ ಗೃಹದಲ್ಲಿಯ ಅನನುಕೂಲತೆ ಹಾಗೂ ಸ್ಥಳ ಸಂಕೋಚಗಳ ಕಾರಣದಿಂದ ಬೇರೊಂದು ಗೃಹವನ್ನು ನೋಡುವ ಅವಶ್ಯಕತೆ ಕಂಡು ಬಂದಿತು. ಈ ಸಂದರ್ಭದಲ್ಲಿಯೇ ಬಾಳಾಚಾರ್ಯರು ಸವಣೂರು ಸಮೀಪದ ಸಿದ್ಧಾಪುರ ಗ್ರಾಮದಲ್ಲಿದ್ದ ಅನುಕೂಲಗಳನ್ನು ಗಮನಿಸಿ, ಸಿದ್ಧಾಪುರ ಗ್ರಾಮದಲ್ಲಿದ್ದ ಜಮೀನು ಮೊದಲಾದವುಗಳ ಮೇಲ್ವಿಚಾರಣೆಗೆ ಅನುಕೂಲವೆಂದು ವಿಚಾರಿಸಿ ಅಲ್ಲಿಯೇ ಗೃಹ ನಿರ್ಮಾಣ ಮಾಡಿಕೊಂಡು ವಾಸಿಸತೊಡಗಿದರು. ನಿತ್ಯ ಪೂಜೆ ವೈಶ್ವದೇವ ಬಲಿಹರಣ ಹಸ್ತೋದಕ ಇತ್ಯಾದಿಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿಕೊಂಡು ಪತ್ನಿಯೊಡನೆ ಶಾಸ್ತ್ರೋಕ್ತ ವಿಧಿಗಳಿಗನುಗುಣವಾಗಿ ಗ್ರಹಸ್ಥ ಧರ್ಮಗಳನ್ನು ಪಾಲಿಸುತ್ತ ವಾಸಿಸಿದರು.

ಈ ಪ್ರಕಾರ ದಿನಕಳೆಯುತ್ತಿರಲು ನವಮಾಸಗಳು ಪೂರ್ಣವಾದ ನಂತರ ಭಾಗೀರಥಿಯು ಶಾಲಿವಾಹನಶಕೆ 1678 ಕ್ರಿ.ಶ. 1756 ರ ಈಶ್ವರ ನಾಮ ಸಂವತ್ಸರ ಶ್ರಾವಣ ಕೃಷ್ಣ ಅಷ್ಟಮಿ ಚಂದ್ರೋದಯ ಸಮಯದಲ್ಲಿ (ಎಂದರೆ ಸುಮಾರು 11 ಘಂಟೆ 30 ನಿಮಿಷಗಳ ಸುಮಾರಿಗೆ) ಪುತ್ರನಿಗೆ ಜನ್ಮ ನೀಡಿದಳು.

(ಸಿದ್ಧಾಪುರವು ಸವಣೂರಿನಿಂದ ಸುಮಾರು 15 ಮೈಲಿ ದೂರದಲ್ಲಿರುವ ಚಿಕ್ಕ ಗ್ರಾಮ. ಈ ಊರಿನಲ್ಲಿ ಒಂದು ವಿಶೇಷವೆಂದರೆ ತುಳಸಿ ಗಿಡವು ಬಹಳ ಚೆನ್ನಾಗಿ ಬೆಳೆಯುತ್ತದೆ. ಎಷ್ಟು ಗಿಡಗಳನ್ನು ಕಿತ್ತು ಬಿಸಾಡುತ್ತಾರೆ ಆದರೂ ಬಹಳ ತುಳಸಿ ಗಿಡಗಳ ಬೆಳವಣಿಗೆಯನ್ನು ಈ ಊರಲ್ಲಿ ಕಾಣಬಹುದು. ಅಡವೀ ಆಚಾರ್ಯರಂತಹ ಮಹಾಜ್ಞಾನಿಗಳಿಗೆ ಜನ್ಮವಿತ್ತ ಗ್ರಾಮವಾದ ಕಾರಣ ಈ ಊರಲ್ಲಿ ತುಳಸಿ ವಿಪುಲವಾಗಿ

ಬೆಳೆಯುತ್ತದೆ. ಇದೇ ದೊಡ್ಡವರ ಅನುಗ್ರಹ ಸೂಚಕ. ವಿಷ್ಣುತೀರ್ಥರು ಜನಿಸಿದ ಮನೆಯು ಕಾಲಕ್ರಮೇಣ ಬಿದ್ದುಹೋಯಿತು. ಆ ಖಾಲಿ ನಿವೇಶನವನ್ನು ಕುರುಬವಂಶೀಯರು ಕೊಂಡರಂತೆ. ಈ ಜಾಗವನ್ನು ಕೊಂಡ ಮನೆತನಕ್ಕೂ ಅಡವೀ ಎಂದೇ ಹೆಸರಾಯಿತು. ಈ ಮನೆಯಲ್ಲಿ ವಾಸಿಸುವ ಅನೇಕರು ಈಗಲೂ ವಿಷ್ಣುತೀರ್ಥರ ಆರಾಧನಾ ಸಮಯದಲ್ಲಿ ಬಂದು ದರ್ಶನ ಪಡೆದುಹೋಗುತ್ತಾರೆ. ಈ ಎಲ್ಲ ವೃತ್ತಾಂತಗಳಿಂದ ಜಯತೀರ್ಥರ ಜನ್ಮಸ್ಥಳ ಸಿದ್ಧಾಪುರವೆಂದು ನಿಶ್ಚಿತವಾಗುತ್ತದೆ).

ಶ್ರೀಕೃಷ್ಣನ ಜನ್ಮ ದಿನದಂದು ಜನಿಸಿದ ಇವರು ಮುಂದೆ ಕೃಷ್ಣನ ಉಪಾಸಕರೇ ಆದದ್ದು ಮತ್ತೊಂದು ವಿಶೇಷ. ಇವರ ಉಪಾಸ್ಯ ಮೂರ್ತಿಗಳಲ್ಲಿ ಪ್ರಧಾನ ಮೂರ್ತಿಯು, ರುಕ್ಮಿಣಿ ಸತ್ಯಭಾಮಾ ಸಮೇತ ಶ್ರೀ ಗೋಪಾಲಕೃಷ್ಣನೇ ಆಗಿರುವುದೊಂದು ವಿಶೇಷ (ಈ ಪ್ರತಿಮೆಗಳು ಈಗಲೂ ವಂಶೀಯರು ಹಾಗೂ ಪರ್ಯಾಯಾಸ್ಥರ ಮನೆಯಲ್ಲಿ ಕೂಸನೂರಿನಲ್ಲಿ ಇದ್ದು ಅತ್ಯಂತ ಸನ್ನಿಧಾನಯುಕ್ತವಾಗಿ ಸುಂದರ ಮೂರ್ತಿಗಳಾಗಿವೆ) ಕೃಷ್ಣಪಕ್ಷ ಅಷ್ಟಮಿ ಮತ್ತು ಚತುರ್ದಶಿ ತಿಥಿಗಳು ಶುಭದಾಯಕವಲ್ಲವೆಂದು ಜ್ಯೋತಿಷ್ಯಶಾಸ್ತ್ರದ ಅಭಿಪ್ರಾಯವಿದ್ದರೂ ಕೂಡ ಯಾವ ಕೃಷ್ಣನ ಮತ್ತು ರುದ್ರನ ಜನನದಿಂದ ಅವು ಲೋಕ ಪೂಜಿತವಾದವೋ ಅಂಥ ಲೋಕನಿಂದಿತ ತಿಥಿಗಳನ್ನೇ ತಮ್ಮ ಅವತಾರ ಹಾಗೂ ನಿರ್ಯಾಣಕ್ಕೆ ವಿಷ್ಣುತೀರ್ಥರು ಆರಿಸಿಕೊಂಡದ್ದೊಂದು ವಿಶೇಷ. ಲೋಕದ ಹೊಗಳಿಕೆ, ತೆಗಳಿಕೆಯನ್ನು ಲೆಕ್ಕಿಸದೇ ಭಗವಂತನಲ್ಲಿ ರತರಾಗಬೇಕೆಂಬ ವಿಷ್ಣುತೀರ್ಥರ ಉಪದೇಶಗಳ ಹಾಗೂ ಜೀವನಾದರ್ಶದ ಸೂಚಕವೂ ಇದಾಗಿದೆ. ಮುಂದೆ ಇವರ ವಿದ್ಯಾ ಗುರುಗಳಾದ ಶ್ರೀ ವ್ಯಾಸತತ್ವಜ್ಞತೀರ್ಥರು ಗೋಕುಲಾಷ್ಟಮಿಯಂದೇ ಪರಂಧಾಮ ಗೈದಿದ್ದು ಇನ್ನೂ ಸೋಜಿಗದ ಸಂಗತಿ.

ಸಜ್ಜನ ಕುಮುದಗಳಿಗೆ ಚಂದ್ರನಂತಿರುವ, ಸಾಧಕ ಚಾತಕಗಳಿಗೆ ಮೇಘದಂತಿರುವ ಕಮಲಗಳಿಗೆ ಸೂರ್ಯನಂತಿರುವ, ತತ್ವಪಿಪಾಸುಗಳಿಗೆ ಅಮೃತ ಜಲದಂತಿರುವ, ಭಕ್ತದುಂಬಿಗಳಿಗೆ ಕುಸುಮದಂತಿರುವ ಸುಲಕ್ಷಣ ರೂಪಯುಕ್ತವಾದ ಮಗುವನ್ನು ನೋಡಿ ಎಲ್ಲರೂ ಸಂಭ್ರಮಿಸಿದರು. ತಂದೆ ತಾಯಿಗಳ ಸಂತೋಷಕ್ಕಂತೂ ಸೀಮೆಯೇ ಇಲ್ಲ.

ಜಾತಕರ್ಮ ನಾಮಕರಣಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಆಚರಿಸಿದ ಬಾಳಾಚಾರ್ಯರು ತಮ್ಮ ತಂದೆಗಳ ವಚನವನ್ನು ಆದೇಶವೆಂದು ಭಾವಿಸಿ ''**ಜೇಷ್ಠರು ಆಡಿದ ವಚನಗಳನ್ನು ಥಟ್ಟನೆ ಧ್ಯಾನಕ್ಕೆ ತಂದು ಪುಟ್ಟಿದವರಿಗೆ ಹೆಸರಿಟ್ಟು ಕರೆದನು ಸ್ಪಷ್ಟದಿ ಜಯತೀರ್ಥನು ಎಂದು**''.

# ಬೆಳೆವ ಸಿರಿ ಮೊಳಕೆಯಲ್ಲಿ

ಹೀಗೆ ಸಿದ್ದಾಪುರದಲ್ಲಿ ಪವಿತ್ರ ಕೃಷ್ಣಾಷ್ಟಮಿಯ ದಿವಸ ಜನ್ಮ ತಳೆದ ಬಾಲಕ ಜಯತೀರ್ಥ ಗೋಕುಲದ ಬಾಲಕೃಷ್ಣನಂತೆಯೇ ಮುದ್ದಾಗಿದ್ದ. ನೋಡಿದವರೆಲ್ಲ ಬಾಲಕನ ಸುಂದರ ಮನಮೋಹಕ ಸೌಂದರ್ಯಕ್ಕೆ ಮರುಳಾಗಿ ಅವನನ್ನು ಎತ್ತಿ ಮುದ್ದಾಡುತ್ತಿದ್ದರು. ತಂದೆ ತಾಯಿಗಳಿಗಂತೂ ಅವನನ್ನು ಎಷ್ಟು ಎತ್ತಿ ಮುದ್ದಾಡಿದರೂ ಮನಕ್ಕೆ ತೃಪ್ತಿ ಇಲ್ಲ.

''**ಬೆಳೆದ ಪುತ್ರ ಮನೆಯೊಳಗೆ ತನ್ನ ಗುಣಗಳನ್ನು ತೋರುತ್ತಲೆ ದಿನ ದಿನಕೆ ಎಳೆಯ ಚಂದ್ರ ತಾ ಬೆಳೆಯುತಿರಲು ತನ್ನ ಕಳೆಯ ತೋರಿದ ಪರಿ ಈ ಜನಕೆ ಬಾಲನ ಕಂಡಾಕಾಲಕೆ ಹಿಗ್ಗುತ ಲಾಲಿಸಿದನು ನರಹರಿವರ್ಮ ಮ್ಯಾಲೆ ಮಾಡಿದನು ಕಾಲವ ಬಿಡದಲೆ ಚೌಲಮುಂಜಿ ಬಂಧನ ಕಾರ್ಯ**'' ಎಂದು ಅನಂತಾದ್ರೀಶರು ವರ್ಣಿಸಿದ ರೀತಿಯಲ್ಲಿ ಬಾಲಕ ಜಯತೀರ್ಥನು ಎಳೆವೆಯಲ್ಲಿಯೇ ಒಂದೊಂದಾಗಿ ತನ್ನ ಗುಣಗಳನ್ನು ಪ್ರಕಟಗೊಳಿಸುತ್ತ, ಎಳೆಯ ಚಂದ್ರನಂತೆ ದಿನ ದಿನಕ್ಕೂ ಮೈದುಂಬಿ ಬೆಳೆಯತೊಡಗಿದ. ತಂದೆಯಾದ ಬಾಳಾಚಾರ್ಯರು ಕಾಲಕ್ಕೆ ಸರಿಯಾಗಿ ನಡೆಯಬೇಕಾದ ಚೌಲ ಅಕ್ಷರಾಭ್ಯಾಸಗಳನ್ನು ಮಾಡಿಸಿದರು. ಮುಂದೆ ಸರಿಯಾದ ಸಮಯದಲ್ಲಿ ಉಪನಯನವನ್ನು ಮಾಡಿ ಗಾಯತ್ರಿಯನ್ನು ಉಪದೇಶಿಸಿ ಮಗನನ್ನು ಶಾಸ್ತ್ರಾಧ್ಯಯನಕ್ಕೆ ಯೋಗ್ಯನನ್ನಾಗಿ ಮಾಡಿದರು.

ಉತ್ತಮ ವಿದ್ವಾಂಸರಾಗಿದ್ದ ಬಾಳಾಚಾರ್ಯರು ಸ್ವತಃ ಮಗನಿಗೆ ಕಾವ್ಯ ಮೊದಲಾದ ಪ್ರಾರಂಭಿಕ ಪಾಠಗಳನ್ನು ಹೇಳಿದರು. ಕುಶಾಗ್ರಮತಿಯೂ ಏಕಸಂಧಿಗ್ರಾಹಿಯೂ ಆಗಿದ್ದ ಜಯತೀರ್ಥ ತಂದೆಯವರು ಕಲಿಸಿದ್ದನ್ನೆಲ್ಲಾ ಕಲಿತ. ಅದರಲ್ಲೂ ಬಾಲಕ ಜಯತೀರ್ಥನಿಗೆ ಶ್ರೀಮನ್ಮಧ್ವಾಚಾರ್ಯರ ಜೀವನವನ್ನು ಭವ್ಯವಾಗಿ ನಿರೂಪಿಸುವ ಮಂತ್ರತುಲ್ಯ ಕೃತಿ ಶ್ರೀ ಸುಮಧ್ವವಿಜಯದಲ್ಲಿ ಅಪಾರ ಆಸಕ್ತಿಯಿತ್ತು. ''ಸುಮುಮೋದ ಮಧ್ವವಿಜಯೈಕರತೇ'' ಎಂಬಂತೆ ಚಿಕ್ಕ ವಯಸ್ಸಿಗೆ ಹದಿನಾರು ಸರ್ಗಗಳ ಮಹೋನ್ನತ ಕೃತಿಯಾದ ಸುಮಧ್ವವಿಜಯದ ಒಂದು ಸಾವಿರದ ಎಂಟುನೂರು ಶ್ಲೋಕಗಳನ್ನು ಕಂಠಪಾಠ ಮಾಡಿದ್ದ. ಪ್ರತಿನಿತ್ಯ ಪೂರ್ತಿಯಾಗಿ ಸುಮಧ್ವವಿಜಯದ ಪಾರಾಯಣವನ್ನು ತಪ್ಪದೇ ಮಾಡುತ್ತಿದ್ದ. ಮುಂದೆ ಸುಮಧ್ವವಿಜಯದ ಪಾರಾಯಣವು ಅವರ ಜೀವನದ ನಿತ್ಯ ವಿಧಿಗಳಲ್ಲೊಂದಾಯಿತು. ಮುನವಳ್ಳಿಯಲ್ಲಿ ವಾಸವಾಗಿದ್ದ ತಮ್ಮ ವಾನಪ್ರಸ್ಥದ ಅವಧಿಯಲ್ಲೂ ಅವರು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಮಲಾಪಹಾರೀ ನದಿಯಲ್ಲಿ

ಮಿಂದು ಪದ್ಮಾಸನ ಹಾಕಿ ಕುಳಿತು ಸುಮಧ್ವವಿಜಯವನ್ನು ಪ್ರತಿನಿತ್ಯ ಪಾರಾಯಣ ಮಾಡುತ್ತಿದ್ದ ವಿವರ ಬಂದಿದೆ.

ಉಪನೀತನಾಗಿ, ಗಾಯತ್ರಿಯ ಉಪಾಸನೆಯನ್ನು ಮಾಡುತ್ತ ಪ್ರಾರಂಭದ ಶಿಕ್ಷಣವನ್ನು ತಂದೆಯಿಂದಲೇ ಪಡೆದು ಸುಮಧ್ವವಿಜಯದ ಅಧ್ಯಯನ, ಪಾರಾಯಣಗಳಿಂದ ವಿಶೇಷ ಸಿದ್ಧಿಯನ್ನು ಪಡೆದ ಜಯತೀರ್ಥನು ಉನ್ನತ ವಿದ್ಯಾಭ್ಯಾಸವನ್ನು ಪಡೆಯುವ ಹಂತವನ್ನು ತಲುಪಿದ.

## ಗುರುಕುಲದಲ್ಲಿ ಜಯತೀರ್ಥ

ಹೀಗೆ ಸದಾಚಾರಗಳಿಂದ ನಿರಂತರ ಅಧ್ಯಯನ, ಪಾರಾಯಣ ಹಾಗೂ ಜಪಗಳಿಂದ ವಿಶೇಷ ಕಾಂತಿಯುಕ್ತನಾಗಿ ಕಂಗೊಳಿಸತೊಡಗಿದ, ಬಾಲಕ ಜಯತೀರ್ಥನನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾದರು. ಹೀಗಿದ್ದಾಗಲೇ ಬಾಲಕ ಜಯತೀರ್ಥನಿಗೆ ಪೂರ್ವ ಜನ್ಮದ ಸ್ಮೃತಿಯೊದಗಿತು. ತಾನು ಅವತರಿಸಿದ ಉದ್ದೇಶ ಯಾವುದು. ಟೀಕಾಚಾರ್ಯರ ಆದೇಶವೇನು ಎಂಬುದು ಸ್ಪಷ್ಟವಾಗಿ ಸ್ಮೃತಿ ಪಟಲದಲ್ಲಿ ತೋರಿತು. ಟೀಕಾಚಾರ್ಯರ ಗ್ರಂಥಗಳ ಅಧ್ಯಯನ, ಅಧ್ಯಾಪನ, ವ್ಯಾಖ್ಯಾನಗಳೇ ತನ್ನ ಜೀವನದ ಪರಮೋದ್ದೇಶವೆಂದು ಮನವರಿಕೆಯಾಯಿತು. ''**ದಾರುಣಿಯೊಳು ಟೀಕಾಕಾರರು ಕಳುಹಿದಾರೆನ್ನಾ ಸಾರಿ ಹೇಳಿ ನೀನು ಲೋಕೋದ್ಧಾರ ಮಾಡೆಂದು ಅನ್ಯರು ಶಿಷ್ಯರು ಬಹು ಮಾನ್ಯರು ಇರಲಿಕ್ಕೆ ಬಿಟ್ಟು ನನ್ನನ್ನೇ ಕಳಿಸಿರಲು ನಾ ಧನ್ಯನಾದೆನು**'' ಎಂದು ಟೀಕಾಕೃತ್ಪಾದರ ಕಾರುಣ್ಯವನ್ನು ನೆನೆದು ತಮ್ಮ ಮೇಲೆ ಮಾಡಿದ ಅನುಗ್ರಹದಿಂದ ಪುಲಕಿತರಾದರು. ಅದಕ್ಕಾಗಿ ತಾವೀಗಲೇ ಜನ್ಮಾಂತರದಲ್ಲಿ ಅಧ್ಯಯನ ಮಾಡಿ ವಿದ್ಯೆಯನ್ನು ಸಂಪಾದಿಸಿದ್ದರೂ ಕೂಡ ಗುರುಗಳ ಮುಖದಿಂದಲೇ ವಿದ್ಯೆಯನ್ನು ಪಡೆದರೆ ಫಲವತ್ತರವಾಗುವದೆಂಬ ಶಾಸ್ತ್ರದ ಆದೇಶದಂತೆ ಗುರುಗಳ ಬಳಿಗೆ ಹೊರಡಲು ಸಿದ್ಧರಾದರು. ''**ಗುರುಶಿಕ್ಷಿತನಾದ ಮೇಲೆ ಗುರುವಾಗಬೇಕೆಂದು ತಿಳಿಸಿ ಗುರುಕುಲವಾಸಕ್ಕೆ ನಡೆದ ಗುರುರಾಜ ತಾನು**'' ಹೀಗೆ ಶಿಷ್ಯನಾಗದೆ ಯಾರಿಗೂ ಗುರುವಾಗುವ ಅರ್ಹತೆ ಬರುವುದಿಲ್ಲವೆಂಬ ತತ್ವವನ್ನು ಹಾಗೂ ಎಷ್ಟೇ ಸಿದ್ಧ ಪುರುಷನಾದರು ಗುರೂಪದೇಶ ಗುರು ಸೇವೆಗಳು ಎಷ್ಟು ಮುಖ್ಯವೆಂಬುದನ್ನು ಜಗತ್ತಿಗೆ ತೋರಿಸಿದರು.

# ಗುರುಗಳ ಸಮಾಗಮ

ಯಾವುದೇ ವಿದ್ಯೆ ಕರಗತವಾಗಬೇಕಾದರೂ ಗುರುಗಳ ಮಾರ್ಗದರ್ಶನಬೇಕು. ಕಲಿತ ವಿದ್ಯೆ ಫಲಿಸಬೇಕಾದರೆ ಗುರುಗಳ ಅನುಗ್ರಹಬೇಕು. ಗುರುವಿನ ಕೃಪೆಯಾಗುವತನಕ ಯಾವ ವಿದ್ಯೆಯೂ ಸಿದ್ಧಿಸಲಾರದು. ಗುರುವಿನ ಗುಲಾಮನಾಗುವತನಕ ಮೋಕ್ಷವೂ ದೂರದ ಮಾತು. ''ಗುರುಷುಸ್ಥಿತ್ವಾ ಜ್ಞಾನೋಪದೇಷ್ಟ್ರೇ ನಮಃ'' ಎಂದು ವೇದವ್ಯಾಸ ಗದ್ಯದಲ್ಲಿ ಹೇಳಿದಂತೆ ಪರಮಾತ್ಮನೂ ಕೂಡ ಗುರುದ್ವಾರದಿಂದಲೇ ಬೋಧಿಸುವವನು. ಗುರುಗಳ ಮುಖಾಂತರವೇ ಅನುಗ್ರಹಿಸುವನು ಆದ್ದರಿಂದ ತಾವು ಓರ್ವ ಯೋಗ್ಯ ಗುರುವನ್ನು ಆಶ್ರಯಿಸಬೇಕೆಂದು ನಿಶ್ಚಯಿಸಿದ ಜಯತೀರ್ಥನು ಗುರುಮಧ್ವಚಿಹ್ನಯುತ ಪುಣ್ಯಪುರವೆಂದೇ ಪ್ರಸಿದ್ಧವಾದ ಕಲಿಯುಗ ಕಾಮಧೇನು ಕಲ್ಪವೃಕ್ಷರಾದ ರಾಘವೇಂದ್ರ ಸ್ವಾಮಿಗಳು ವೃಂದಾವನ ಪ್ರವೇಶ ಮಾಡಿದ ತುಂಗಾತೀರದಲ್ಲಿರುವ ''ಮಂತ್ರಾಲಯವೆಂಬ'' ಮಂಗಳಕರ ಕ್ಷೇತ್ರಕ್ಕೆ ತಂದೆ ತಾಯಿಗಳ ಅನುಮತಿ ಪಡೆದು ಪ್ರಯಾಣ ಬೆಳೆಸಿದ.

ಮಂತ್ರಾಲಯದಲ್ಲಿ ಬಂದು ಗುರುರಾಜರ ಸನ್ನಿಧಾನದಲ್ಲಿ ನಿಂತು ಗುರುಗಳ ದರ್ಶನಕ್ಕಾಗಿ ಹಂಬಲಿಸುತ್ತಿದ್ದ ಜಯತೀರ್ಥನಿಗೆ ಟೀಕಾಕೃತ್ಪಾದರಿಂದ ಪ್ರೇರಿತರಾದ ರಾಘವೇಂದ್ರರೇ ಗುರುಗಳ ದರ್ಶನ ಮಾಡಿಸಿದರು. ಭಗವಂತನ ಪ್ರೇರಣೆಯಂತೆ ಬಾಯಾರಿದವನಿಗೆ ಅಮೃತ ಜಲ ದೊರಕಿದಂತೆ ಆಯಿತು. ಜಯತೀರ್ಥನಿಗೆ ಹುಡುಕುವ ಬಳ್ಳಿ ಕಾಲಿಗೆ ತೊಡರಿದಂತೆ ಜಯತೀರ್ಥನು ಹುಡುಕುತ್ತಿದ್ದ ಗುರುಗಳು ಜಯತೀರ್ಥನನ್ನೇ ಹುಡುಕುತ್ತಾ ಮಂತ್ರಾಲಯಕ್ಕೆ ಬಂದಿದ್ದರು. ಗುರುಶಿಷ್ಯರ ಸಮಾಗಮವನ್ನು ಭಗವಂತನೇ ಮಂತ್ರಾಲಯದಲ್ಲಿ ಮಾಡಿಸಿದ. ಪಂಡಿತ ಶ್ರೇಷ್ಠರಾದ ''ಕವಿರಾಜರಾಜವರ ಮೌಲಿಮಣಿ ಬಹುಲೋಕ ಲಾಲಿತ ಮಹಾಯಶಸಃ'' ಎಂದು ಪಂಚರತ್ನದಲ್ಲಿ ಹೇಳಿದ ಕವಿರಾಜ ರಾಜಮಣಿಗಳೆಂದು, ಲೋಕಪ್ರಸಿದ್ಧರಾದ ಮಹಾಮಹೋಪಾಧ್ಯಾಯರಾದ ಐಜಿ ವೆಂಕಟರಾಮಾಚಾರ್ಯರನ್ನು ಜಯತೀರ್ಥನಿಗೆ ಗುರುಗಳನ್ನಾಗಿಸಿದ.

ತನ್ನನ್ನು ಉದ್ಧರಿಸುವ ಗುರುಗಳನ್ನು ಅರಸುತ್ತ ತಮ್ಮಲ್ಲಿಗೆ ಬಂದ ಜಯತೀರ್ಥನಿಗೆ ಐಜಿ ವೆಂಕಟರಾಮಾಚಾರ್ಯರನ್ನು ಗುರುಗಳನ್ನಾಗಿಯೂ ತಮ್ಮ ಕೀರ್ತಿಯನ್ನು ಆಕಾಶದೆತ್ತರಕ್ಕೆ ಏರಿಸುವ ಶಿಷ್ಯನನ್ನು ಅಪೇಕ್ಷಿಸುತ್ತಿದ್ದ ಐಜಿ ಆಚಾರ್ಯರಿಗೆ ಜಯತೀರ್ಥನನ್ನು ಶಿಷ್ಯನನ್ನಾಗಿಯೂ ಘಟನೆ ಮಾಡಿದ ಭಗವಂತನ ಲೀಲೆಯೇ

ವಿಸ್ಮಯವಾದುದು. ಕರ್ನಾಟಕದ ಮಧ್ಯದೇಶದ ಚಿಕ್ಕಗ್ರಾಮ ಸಿದ್ಧಾಪುರವೆಲ್ಲಿ, ಈಗಿನ ಆಂಧ್ರಪ್ರದೇಶದ ಗದ್ವಾಲ್ ದೇಶಕ್ಕೆ ಸೇರಿದ ಒಳಭಾಗದಲ್ಲಿರುವ ಪುಟ್ಟಹಳ್ಳಿ ವೇಣಿಸೋಮಪುರವೆಲ್ಲಿ, ಸುಮಾರು 450 ಕಿಲೋಮೀಟರುಗಳ ದೂರದ ಪ್ರದೇಶದಲ್ಲಿರುವ ಎರಡು ಪುಟ್ಟ ಗ್ರಾಮಗಳಿಂದ ಬಂದ ಗುರುಶಿಷ್ಯರನ್ನು ಸೇರಿಸಿದ ಭಗವಂತನ ಲೀಲೆಯೇ ವಿಸ್ಮಯಕರವಾದುದು. ತನ್ನನ್ನು ದೃಢವಾಗಿ ನಂಬಿದವರ ಸಾಧನೆಯ ಮಾರ್ಗವನ್ನು ತಾನೇ ತೋರಿಸುತ್ತಾನೆಂಬ ''ಏಷಪಂಥಾ'' ಎಂಬ ಶಾಸ್ತ್ರೀಯ ಪ್ರಮೇಯಕ್ಕೂ ಇದು ನಿದರ್ಶನವಾಗಿದೆ.

## ಮಹಾಮಹಿಮ ಗುರುಗಳು

''**ಅಲ್ಲೊಬ್ಬನಿರುವ ಪಂಡಿತರೊಳಗತಿ ಬಲ್ಲಿದ ಪಂಡಿತನು । ಎಲ್ಲಾ ಗುಣಗಳಿಂದ ಸಂಪನ್ನನಾಗಿಹ ಎಲ್ಲರಿಂದ ಮಾನ್ಯನು । ಐಜಿ ವೆಂಕಟರಾಮಾಚಾರ್ಯನೆಂದೆನಿಸುವ ಈ ಜಗತಿಯೊಳಗೆ**'' ಎಂದು ಅನಂತಾದ್ರೀಶರು ಹಾಡಿರುವಂತೆ ಪಂಡಿತಾಗ್ರಣಿಗಳೂ ಮಹಾಮಹೋಪಾಧ್ಯಾಯರು ಅನೇಕ ಸ್ವತಂತ್ರ ಗ್ರಂಥಗಳನ್ನು, ಟಿಪ್ಪಣಿ ಗ್ರಂಥಗಳನ್ನು ಹಾಗೂ ಅನೇಕ ಕನ್ನಡ ಕೃತಿಗಳನ್ನು ನಿರ್ಮಾಣ ಮಾಡಿದ ಐಜಿ ಆಚಾರ್ಯರ ವ್ಯಕ್ತಿತ್ವವು ಅತಿ ವಿಶಿಷ್ಟವಾದುದು. ವ್ಯಾಸದಾಸ ಸಾಹಿತ್ಯಗಳ ಸವ್ಯಸಾಚಿಗಳಾದ ಇವರ ಚರಿತೆ ಆಶ್ಚರ್ಯಕರವಾದುದು. ಅವರ ಜೀವನವೃತ್ತಾಂತವೇ ಚೇತೋಹಾರಿ ಘಟನೆಗಳಿಂದ ಕೂಡಿರುವುದು. ಈಗಿನ ಆಂಧ್ರಪ್ರದೇಶದ ರಾಜ್ಯದ ಐಜಿ ಗ್ರಾಮದಲ್ಲಿ ವಾಸಿಸುತ್ತಿದ್ದ ಶ್ರೀ ವೆಂಕಟನರಸಿಂಹಾಚಾರ್ಯರ ಪುತ್ರರಾಗಿ ಶ್ರೀ ವೆಂಕಟೇಶನ ವರಪ್ರಸಾದದಿಂದ ಜನಿಸಿದವರು. ವೆಂಕಟರಾಮಾಚಾರ್ಯ ಎಂಬ ನಾಮಧ್ಯೇಯವುಳ್ಳವರು. ಬಾಲ್ಯದಲ್ಲಿ ವಿದ್ಯೆಗೆ ವಿಮುಖರಾಗಿ ಜಡಭರತನಂತೆ ವರ್ತಿಸಿದರು. ಐಜಿ ಗ್ರಾಮದ ಹತ್ತಿರದಲ್ಲೇ ವಾಸಿಸುತ್ತಿದ್ದ ಗಾಯತ್ರಿ ಮಂತ್ರೋಪಾಸನೆಯಿಂದ ಸಿದ್ಧಿ ಪಡೆದಿದ್ದ ಶ್ರೀ ಗೋಪಾಲದಾಸರ ಸೂಚನೆಯಂತೆ ತಂದೆಯವರಾದ ಶ್ರೀ ವೆಂಕಟರಾಮಾಚಾರ್ಯರು ಮಾಡಿದ ಪಾರಾಯಣ ಶ್ರವಣ ಮಾತ್ರದಿಂದ ವೇದಶಾಸ್ತ್ರಪುರಾಣ ಇತಿಹಾಸ ವೇದಾಂಗಗಳು ಇತ್ಯಾದಿ ಸಕಲ ಶಾಸ್ತ್ರಗಳನ್ನು ಸ್ಮರಿಸಿಕೊಂಡು ಮಹಾ ವಿದ್ವಾಂಸರಾಗಿ ಎರಡು ನೂರಕ್ಕಿಂತಲೂ ಹೆಚ್ಚು ವಿದ್ಯಾರ್ಥಿಗಳಿಗೆ ಅನ್ನದಾನವಿತ್ತು ಪಾಠ ಹೇಳಿ ಅನೇಕ ಸಭೆಗಳಲ್ಲಿ ತಮ್ಮ ಶಿಷ್ಯರು ಜಯಪತ್ರ ಸಂಪಾದಿಸುವಂತೆ ಅನುಗ್ರಹಿಸಿದ ಮಹಾಮಹೋಪಾಧ್ಯಾಯರೆಂದು ಬಿರುದಾಂಕಿತ ವಿದ್ವಾಂಸರು ಅವರು. ಅಗ್ನಿಹೋತ್ರಿಗಳೂ, ಕರ್ಮಠರೂ, ಚತುಃಶಾಸ್ತ್ರ ಪಂಡಿತರಾಗಿ ವಿಪುಲ ಶಿಷ್ಯ ಸಂಪತ್ತನ್ನು

ಪಡೆದುದಷ್ಟೇ ಅಲ್ಲ 12 ಸಾರಿ ಶ್ರೀಮನ್ನ್ಯಾಯಸುಧಾ ಪಾಠವನ್ನು ಹೇಳಿ ಇಷ್ಟ ದೈವನಾದ ತಿರುಪತಿ ಶ್ರೀನಿವಾಸನ ಸನ್ನಿಧಿಯಲ್ಲಿ ಮಂಗಳವನ್ನು ನೆರವೇರಿಸಿದವರು. ಅನೇಕ ಪ್ರತಿಭಾನ್ವಿತ ಪಂಡಿತ ಶ್ರೇಷ್ಠರನ್ನು ಉಪಾಸಕರನ್ನು ಸಾಧಕರನ್ನು ಸಮಾಜಕ್ಕೆ ನೀಡಿದವರು. ಅಂಥ ಶಿಷ್ಯರಲ್ಲಿ ಶ್ರೀ ವಿಷ್ಣುತೀರ್ಥರೂ ಒಬ್ಬರು.

ವಾಯುದೇವರ ಪ್ರೇರಣೆಯಂತೆ ಕೃಷ್ಣಾ ತೀರದ ಬೀಚಪಲ್ಲಿಯಲ್ಲಿ ನೆಲೆಸಿ ಅಲ್ಲಿ ವ್ಯಾಸರಾಜ ಪ್ರತಿಷ್ಠಿತ ಪ್ರಾಣದೇವರನ್ನು ಹನ್ನೆರಡು ವರ್ಷಗಳ ಕಾಲ ಸೇವಿಸಿ ಸಿದ್ಧ ಪುರುಷರಾದವರು. ಮಾನಸ ಸ್ಮೃತಿ, ಸುಧಾದ್ಯುಕ್ತಿರಹಸ್ಯ, ಚಂದ್ರಿಕಾ ಶರದಾಗಮ, ಮಂದನಂದಿನಿ, ಅದ್ವೈತಕುಟ್ಟನ, ಇತ್ಯಾದಿಯಾಗಿ ಅನೇಕ ಪ್ರೌಢವಾದ ಸಂಸ್ಕೃತ ಗ್ರಂಥಗಳನ್ನು ರಚನೆ ಮಾಡಿದರಲ್ಲದೆ ವಾಸುದೇವ ವಿಠಲನೆಂಬ ಅಂಕಿತದಿಂದ ನೂರಾರು ಹಾಡುಗಳನ್ನು ರಚಿಸುವ ಮೂಲಕ ಸಂಸ್ಕೃತ ವಾಙ್ಮಯ ಮತ್ತು ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಜಗನ್ನಾಥದಾಸರು, ಗೋಪಾಲದಾಸರು ಹಾಗೂ ಅವರ ಸಹೋದರರಾದ ಗುರುಗೋಪಾಲದಾಸರು ವರದಗೋಪಾಲದಾಸರು ತಂದೆ ಗೋಪಾಲದಾಸರು ಮುಂತಾದವರು ಅತಿ ನಿಕಟ ಸಂಪರ್ಕದಲ್ಲಿದ್ದುದು ಇವರ ಮತ್ತೊಂದು ಹಿರಿಮೆ. ಅವರುಗಳ ನಿಕಟ ಸಂಪರ್ಕವೇ ಇವರ ಕನ್ನಡ ಕೃತಿಗಳ ರಚನೆಗೆ ಪ್ರೇರಣೆಯಾಗಿರಲು ಸಾಕು. ಗೋಪಾಲದಾಸರು ಕಾಲವಾದನಂತರ ಅವರ ಮೂವರು ತಮ್ಮಂದಿರು ಇವರ ಬಳಿಯಲ್ಲೇ ವಾಸವಾಗಿದ್ದರೆಂದು ಹೇಳುತ್ತಾರೆ.

ಅಗಾಧವಾದ ಭಗವಂತನ ಕೃಪೆಗೆ ಪಾತ್ರರಾಗಿದ್ದ ಇವರು ತಮಗೆ ಸ್ವಪ್ನ ಸೂಚಿತನಾಗಿ ಒಲಿದು ಬಂದ ಶಿಲ್ಪಶಾಸ್ತ್ರಕ್ಕೆ ವಿರುದ್ಧವೆನಿಸುವ ಬಲಗಾಲಿನ ಮೇಲೆ ಎಡಗಾಲನ್ನು ಇಟ್ಟಿರುವ ಶ್ರೀ ವೇಣುಗೋಪಾಲ ಕೃಷ್ಣನನ್ನು ಹಾಗೂ ಷೋಡಶಬಾಹು ನರಸಿಂಹದೇವರನ್ನು, ಹನ್ನೆರಡು ವರ್ಷಗಳ ಕಾಲ ತಮ್ಮಿಂದ ಪೂಜಿತನಾದ ಪ್ರಾಣದೇವರನ್ನು ತುಂಗಭದ್ರಾ ತೀರದ ವೇಣಿಸೋಮಪುರದಲ್ಲಿ ಪ್ರತಿಷ್ಠಾಪಿಸಿ ವೆಂಕಟರಾಮಾಚಾರ್ಯರು ಅಲ್ಲಿಯೇ ನೆಲೆಗೊಂಡಿದ್ದರು.

ಹೀಗೆ ವೆಂಕಟರಾಮಾಚಾರ್ಯರು ವೇಣೀಸೋಮಪುರದಲ್ಲಿ ನೆಲೆಸಿದ ಸಂದರ್ಭದಲ್ಲಿಯೇ ಜಯತೀರ್ಥರು ಅವರಲ್ಲಿಗೆ ಅಧ್ಯಯನಕ್ಕಾಗಿ ಬಂದು ಸೇರಿದನು. ಆದಾಗಲೇ ಐಜಿ ಆಚಾರ್ಯರಿಗೆ ಅರವತ್ತಕ್ಕಿಂತಲೂ ಹೆಚ್ಚಾದ ವಯಸ್ಸು. ಐಜಿ ವೆಂಕಟ ರಾಮಾಚಾರ್ಯರ ಜನನ ಕ್ರಿ.ಶ. 1704 ರಲ್ಲಿ ಜಯತೀರ್ಥನ ಜನ್ಮವಾದದ್ದು. ಕ್ರಿ.ಶ. 1756 ರಲ್ಲಿ ಉಪನೀತನಾಗಿ ಹತ್ತು ವರ್ಷಕ್ಕೇನೆ ಅಧ್ಯಯನಕ್ಕಾಗಿ ಬಂದುದು ಎಂದರೂ

ಕೂಡ ಅದು ಸುಮಾರು 1766. ಆ ವೇಳೆಗಾಗಲೇ ವೆಂಕಟರಾಮಾಚಾರ್ಯರಿಗೆ ಸುಮಾರು 62 ರ ಇಳಿ ವಯಸ್ಸು.

ಹರಿಕರುಣೆಯಿಂದ ಪಡೆದ ಯೋಗ ಶಕ್ತಿಯಿಂದ ಅನೇಕ ಆಶ್ಚರ್ಯಕರವಾದ, ಅತಿ ಮಾನುಷ ಮಹಿಮೆಗಳನ್ನು ತೋರಿದ ಐಜಿ ವೆಂಕಟರಾಮಾಚಾರ್ಯರೇ ಮುಂದೆ ಮಂತ್ರಾಲಯ ಮಠದ ಪೀಠಾಧೀಶರಾಗಿದ್ದ ಶ್ರೀ ಭುವನೇಂದ್ರ ತೀರ್ಥರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀ ವ್ಯಾಸತತ್ವಜ್ಞರೆಂಬ ಅಭಿಧಾನದಿಂದ ಶೋಭಿಸಿದರು. ವ್ಯಾಸತತ್ವಜ್ಞರಲ್ಲಿ ಅತೀವ ಪೂಜ್ಯ ಭಾವನೆಯನ್ನು ಹೊಂದಿದ್ದ ಶ್ರೀ ಜಗನ್ನಾಥದಾಸರು ಅವರನ್ನು ಕುರಿತು ರಚಿಸಿರುವ ಆವಜನುಮದ ಸುಕೃತ ಫಲಿಸಿತನಗೆ ಕೋವಿದಾಗ್ರಣಿ ವ್ಯಾಸತತ್ವಜ್ಞರ ಕಂಡೆ ಎಂಬ ಕೃತಿಯಲ್ಲಿ ದೈವಾಂಶರಿವರು ಸಂಶಯವು ಬಡಸಲ್ಲ ಮಾಯಾ ವಲ್ಲಭನು ಇವರ ಹೃದಯದೊಳಗಿರುತಿಪ್ಪ ಎಂದು ಇವರನ್ನು ದೈವಾಂಶರೆಂದು ಭಕ್ತಿಯಿಂದ ಸ್ತುತಿಸಿದ್ದಾರೆ.

## ಗುರು ಸನ್ನಿಧಿಯಲ್ಲಿ

ಹೀಗೆ ಜಯತೀರ್ಥನೆಂಬ ಅನರ್ಘ ವಜ್ರವು ಐಜಿ ರಾಮಾಚಾರ್ಯರ ಮಡಿಲನ್ನು ಸೇರಿದರೆ, ಆ ವಜ್ರವನ್ನು ಸಾಣೆ ಹಿಡಿದು ಹೊಳಪು ನೀಡುವ ವಜ್ರಕಾರರಾದರು ವೆಂಕಟರಾಮಾಚಾರ್ಯರು. ತಮ್ಮ ಪಾದ ಕಮಲಗಳಲ್ಲಿ ಎರಗಿದ ಜಯತೀರ್ಥನ ನಯ ವಿನಯಾದಿ ಸದ್ಗುಣಗಳು, ಜ್ಞಾನದಾಹವನ್ನು ಕಂಡ ಐಜಿ ಆಚಾರ್ಯರು ಸಂತುಷ್ಟರಾದರು.

ಹರಿವಾಯು ಗುರುಗಳ ಅನುಗ್ರಹದಿಂದ ತಾವು ಪಡೆದ ವಿದ್ಯೆಯನ್ನು ದಾನನೀಡಿ, ಸಾರ್ಥಕ ಪಡಿಸಿಕೊಳ್ಳಲು ಅನಾಯಾಸವಾಗಿ ಉತ್ತಮ ಶಿಷ್ಯನೊಬ್ಬನನ್ನು ಪಡೆದ ಆಚಾರ್ಯರ ಸಂತಸಕ್ಕೆ ಪಾರವೇ ಇರಲಿಲ್ಲ.

ಜಯತೀರ್ಥನ ಗುರುಕುಲವಾಸ ಆರಂಭವಾಯಿತು. ಅತ್ಯಂತ ನಿಷ್ಠೆಯಿಂದ, ಶ್ರದ್ಧೆಯಿಂದ, ''**ಗುರುಶುಶ್ರೂಷಾದಿಗಳನ್ನು ಮಾಡಿ ಕಲ್ಪಭೂರುಹನೆಂದು ಕಲ್ಪನೆ ಮಾಡಿ ಅನಲ್ಪಶುಶ್ರೂಷವನು ಸ್ವಲ್ಪ ದಿನದಲ್ಲಿ ತಾನೋದಿದ ಬಿಡದೆ ಅನಲ್ಪ ಶಾಸ್ತ್ರಗಳೆಲ್ಲಾನು**'' ಎಂದಂತೆ ಶೀಘ್ರವಾಗಿ ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿದನು.

ಜಯತೀರ್ಥನ ಜ್ಞಾನ ದಾಹ ನಿರಂತರ ಅಧ್ಯಯನ, ಬೇಸರವಿಲ್ಲದ ಚಿಂತನ, ಶ್ರದ್ಧಾಯುಕ್ತ ಗುರುಸೇವೆ ನಿಷ್ಠಾಪೂರ್ಣ ಕರ್ಮಾಚರಣೆ, ನಿರಂತರ ದೈವಚಿಂತನ,

ಮೊದಲಾದ ಗುಣಗಳಿಂದ ಅತಿಪ್ರೀತರಾದ ಗುರುಗಳು ಯಾವಾಗಲೂ ಅವನನ್ನು ತಮ್ಮ ಜೊತೆಗೆ ಕರೆದುಕೊಂಡು ಹೋಗುತ್ತಿದ್ದರು. ಅಷ್ಟೇ ಅಲ್ಲದೇ ಸಂದರ್ಭ ಬಂದಾಗಲೆಲ್ಲ ಅವನ ಬುದ್ಧಿಶಕ್ತಿ ಸದ್ಗುಣಗಳನ್ನು ಕೊಂಡಾಡುತ್ತಿದ್ದರು.

**ಛಂದಾಗಿಶ್ರವಣ ಮನನ ಮಾಡೋ ಕಾಲಕೆ ಬಂದು ಕೊಂಡಾಡಿದನು ।**
**ಮಂದಿರದಲಿ ಪರಮಂದಿರದೊಳ್ಮಂದಿ ಮುಂದ ಕೊಂಡಾಡಿದನು ।**
**ಬಲ್ಲಿದ ಪಂಡಿತ ಮಂಡಳಿ ನೃಪಸಭೆಯಲ್ಲಿ ಕೊಂಡಾಡಿದನು ।**
**ಎಲ್ಲೆಲ್ಲಿ ಹೋಗಲು ಸೊಲ್ಪವು ನಿಲ್ಲದೆ ಅಲ್ಲೆ ಬಿಡದೆ ಕೊಂಡಾಡಿದನು ।**

ಈ ರೀತಿಯಾಗಿ ಶಿಷ್ಯನ ವಿನಯ ಅಧ್ಯಯನ ಶೀಲತೆ, ಸದಾಚಾರ, ಗುರುಭಕ್ತಿ ಮುಂತಾದ ಗುಣಗಳಿಂದ ಪ್ರೀತರಾಗಿದ್ದ ಹಾಗೂ ಈ ಶಿಷ್ಯನ ವಿಶೇಷವಾದ ಯೋಗ್ಯತೆಯನ್ನು ಅರಿತಿದ್ದ ಐಜಿ ವೆಂಕಟರಾಮಾಚಾರ್ಯರು ಜಯತೀರ್ಥನನ್ನು ಎಲ್ಲ ಕಡೆಗೂ ಮುಕ್ತ ಕಂಠದಿಂದ ಶ್ಲಾಘನೆ ಮಾಡುತ್ತಿದ್ದರು. ಅಲ್ಲದೆ ಅವನ ಪ್ರತಿಭಾ ಪ್ರದರ್ಶನಕ್ಕೆ ಅನುವು ಮಾಡಿಕೊಟ್ಟು ಶಿಷ್ಯನ ಚಾತುರ್ಯವನ್ನು ನೋಡಿ ಮನದುಂಬಿ ಸಂತೋಷಿಸುತ್ತಿದ್ದರು. ಜಯತೀರ್ಥನ ಸೌಜನ್ಯಾದಿ ಗುಣಗಳಿಂದ ಆಕರ್ಷಿತರಾದ ಅನೇಕ ವಿದ್ಯಾರ್ಥಿಗಳು ಇವನ ಸ್ನೇಹ ಬೆಳೆಸಿ ಆತ್ಮೀಯ ಮಿತ್ರರಾದರು. ಬೆಳೆಯೊಂದಿಗೆ ಕಳೆಯೂ ಇರುವ ಹಾಗೆ ಮತ್ಸರಿಗಳಾದ ಕೆಲವು ಕುಹಕಿಗಳೂ ಅಲ್ಲಿದ್ದರು. ಗುರುಗಳು ಜಯತೀರ್ಥನನ್ನು ಪ್ರಶಂಸೆ ಮಾಡುವುದು ಅವರಿಗೆ ಸ್ವಲ್ಪವೂ ಸಹನೆಯಾಗಲಿಲ್ಲ. ಒಳಗೊಳಗೆ ಜಯತೀರ್ಥನಲ್ಲಿ ಮತ್ಸರಿಸತೊಡಗಿದರು. ಗುಣಗ್ರಾಹಿಗಳಾಗದವರಿಗೆ ಮತ್ತೊಬ್ಬರ ಗುಣಗಳೂ ದೋಷಗಳಂತೆ ಕಾಣುವುದು ಅಚ್ಚರಿ ಏನಲ್ಲ. ಆ ಮತ್ಸರಿಗಳಿಗೆ ಜಯತೀರ್ಥನ ಸದ್ಗುಣಗಳೆಲ್ಲವೂ ಮೋಸದ ಹಂಚಿಕೆಯಾಗಿ ತೋರಿದವು. ತಾವು ಅನೇಕ ವರ್ಷಗಳಿಂದ ಅಧ್ಯಯನ ಮಾಡಿದರೂ ತಿಳಿದುಕೊಳ್ಳಲಾಗದ ಶಾಸ್ತ್ರಗಳನ್ನು ಜಯತೀರ್ಥನು ಕೆಲವೇ ಸಮಯದಲ್ಲಿ ಓದಿ ಅರಗಿಸಿಕೊಂಡನು ಎಂಬುದೇ ಅವರಿಗೆ ನಂಬಲಾಗದ ವಿಷಯವಾಗಿತ್ತು. ಮತ್ಸರಕ್ಕೆ ಕಾರಣವಾಯಿತು. ''ಕಡೆಗೆ ಜನ್ಮಾರಭ್ಯ ಓದಿ ಮುಪ್ಪಾಗಿಹ ಬಿಡದೆ ಶಾಸ್ತ್ರಗಳೆಲ್ಲಾನು ಮುಂಚೆ ಓದದ ಹೊರ್ತು ಸಕಲ ಶಾಸ್ತ್ರದಲ್ಲಿಂಥ ಹಂಚಿಕೆ ಬಾಹೋದೇನು'' ಎಂಬ ವಾದ ಅವರದು. ಅವರೆಲ್ಲ ಸೇರಿ ಒಂದು ದಿನ ಗುರುಗಳಿಗೆ ದೂರು ನೀಡಿದರು. ಗುರುಗಳೇ ನೀವು ಅತಿಶಯವಾಗಿ ಪ್ರಶಂಸೆ ಮಾಡುವಂಥ ಹೆಚ್ಚುಗಾರಿಕೆಯೇನೂ ಜಯತೀರ್ಥನಲ್ಲಿಲ್ಲ. ಇವನು ಈ ಹಿಂದೆಯೇ ಈ ಗ್ರಂಥಗಳನ್ನೆಲ್ಲ ಓದಿಕೊಂಡು ಒಂದು ನಿಮ್ಮನ್ನು ಮೋಸಗೊಳಿಸುತ್ತಿದ್ದಾನೆ., ಇವನು ಚಂಚಲ ಸ್ವಭಾವದವನು, ಸರಿಯಾಗಿ ಲಕ್ಷ್ಯವಿಟ್ಟು ಶ್ರವಣ ಮಾಡುವುದಿಲ್ಲ. ಪಾಠದ

ಕಾಲದಲ್ಲಿ ಬೇರೆ ಗ್ರಂಥಗಳನ್ನು ಅವಲೋಕನ ಮಾಡುತ್ತಾನೆ. ಮನನ ಮಾಡುವುದನ್ನಂತೂ ನಾವೆಂದಿಗೂ ಕಂಡಿಲ್ಲ. ಸರಿಯಾಗಿ ಅಧ್ಯಯನ ಮಾಡದೇ ಇಂಥ ಪ್ರೌಢಿಮೆ ಬರುವುದು ಹೇಗೆ ಸಾಧ್ಯ ಎಂದು ಅನೇಕ ರೀತಿಯಾಗಿ ದೂಷಣೆ ಮಾಡಿದರು.

ಕುಹಕಿಗಳ ಮಾತುಗಳನ್ನು ಕೇಳಿದ ಐಜಿ ಆಚಾರ್ಯರು ಮಂದಹಾಸ ನೀಡಿದರು. ಶಿಷ್ಯನ ಯೋಗ್ಯತೆಯನ್ನು ಚೆನ್ನಾಗಿ ತಿಳಿದ ಅವರು ಮತ್ಸರಿಗಳ ಮಾತಿಗೆ ಸ್ವಲ್ಪವೂ ಕಿವಿಗೊಡಲಿಲ್ಲ. ಅಷ್ಟೇ ಅಲ್ಲ ಜಯತೀರ್ಥನ ಮೇಲೆ ಇನ್ನೂ ಹೆಚ್ಚಿನ ಅಭಿಮಾನ ತೋರಿದರು. ''**ಅನ್ಯರಂತಲೇ ಇವನಲ್ಲವು ಗುಣದಿಂದ ಉನ್ನತನಾಗಿಹನು ಮಾನ್ಯನು ಸುರಮುನ್ಯಾದ್ಯನ್ಯತಮನು ಸಾಮಾನ್ಯನಲ್ಲ ಇವನು**'' ಎಂದು ಶಿಷ್ಯನನ್ನು ಮತ್ತಷ್ಟು ಪ್ರಶಂಸಿಸಿದರು. ಹೀಗೆ ಗುರುಗಳ ಪ್ರೀತಿಗೆ ಪಾತ್ರನಾದ ಜಯತೀರ್ಥನು ಅಲ್ಪಕಾಲದಲ್ಲಿಯೇ ಎಲ್ಲ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಸರ್ವಶಾಸ್ತ್ರ ವಿಶಾರದನಾಗಿ ಅಂದಿನ ಪಂಡಿತ ಮಂಡಲಿಯಲ್ಲಿ ವಿಶೇಷವಾದ ಸ್ಥಾನವನ್ನು ಗಳಿಸಿಕೊಂಡನು.

## ಕೃಷ್ಣನ ಮುಖದಿಂದ ಸೂಸಿದ ಪಂಚಾಮೃತ

ಸರಿಯಾಗಿ ಅಧ್ಯಯನವನ್ನು ಮಾಡಿ ಗುರುಗಳ ಹಾಗೂ ಭಗವಂತನ ಪ್ರೀತಿಗೆ ಪಾತ್ರರಾದ ಜಯತೀರ್ಥಾಚಾರ್ಯರ ಮಹಿಮೆಯನ್ನು ಲೋಕದ ಜನಗಳು ಹಾಗೂ ಅವರ ಯೋಗ್ಯತೆಯನ್ನರಿಯದೇ ದೂಷಿಸಿದವರು ತಿಳಿಯುವ ಪ್ರಸಂಗವೊಂದು ಒದಗಿ ಬಂತು.

ಐಜಿ ಆಚಾರ್ಯರಿಗೆ ಗಂಡು ಸಂತಾನವಿರಲಿಲ್ಲ. ಮೊದಲನೆಯ ಪತ್ನಿಯಲ್ಲಿ ಲಕ್ಷ್ಮಕ್ಕ ಎಂಬ ಓರ್ವ ಮಗಳಿದ್ದಳು. ಆಚಾರ್ಯರಿಗೆ ಸಂತಾನ ಪ್ರಾಪ್ತಿಗೋಸ್ಕರ ಆಗ ತಿರುಪತಿಯಲ್ಲಿದ್ದ ಮಹಾತಪಸ್ವಿಗಳಾಗಿದ್ದ ದಿಗ್ಗಾವಿ ಆಚಾರ್ಯರು ಎರಡು ಹಣ್ಣುಗಳನ್ನು ಅಭಿಮಂತ್ರಿಸಿ ನೀಡಿದ್ದರು. ಅವರು ಕೊಟ್ಟ ಹಣ್ಣುಗಳನ್ನು ದೇವರ ನೈವೇದ್ಯದ ಸಮಯದಲ್ಲಿ ತಮಗೆ ನೀಡುವಂತೆ ತಿಳಿಸಿ ಮಗಳ ಕೈಯಲ್ಲಿ ಕೊಟ್ಟರು. ಸ್ನಾನ ಆಹ್ನಿಕ ಮುಗಿಸಿ ಹಣ್ಣುಗಳನ್ನು ಕೊಡುವಂತೆ ಕೇಳಿದರು. ಮಗಳು ಹಾಗೂ ಅಳಿಯ ಹಸಿವಿನಿಂದ ಬಾಧಿತರಾಗಿ ಹಣ್ಣುಗಳನ್ನು ತಿಂದುದಾಗಿ ಮಗಳು ತಿಳಿಸಿದಳು. ಸ್ವಲ್ಪಹೊತ್ತು ಕಣ್ಣು ಮುಚ್ಚಿ ಧ್ಯಾನರತರಾದ ಆಚಾರ್ಯರು ಶ್ರೀಹರಿ ಇಚ್ಛೆಗೆ ಉಪಾಯವಿಲ್ಲ. ಭಗವಂತನ ಸಂಕಲ್ಪವೇ ಹೀಗಿದೆ. ನಿನಗೆ ಇಬ್ಬರು ಗಂಡು ಮಕ್ಕಳಾಗುವರು ಮೊದಲನೆಯ ಮಗನನ್ನು ನನಗೆ ಒಪ್ಪಿಸಬೇಕು ಎಂದು ಆಜ್ಞೆ ಮಾಡಿದರು. ಕಾಲಕ್ರಮದಲ್ಲಿ ಮಗಳ ಉದರದಲ್ಲಿ

ಜನಿಸಿದ ಹಿರಿಯ ಮಗನನ್ನೇ ದತ್ತು ಸ್ವೀಕಾರ ಮಾಡಿದರು. ಇವರಿಗೆ ಗೋಪಾಲಕೃಷ್ಣಾಚಾರ್ಯರೆಂದು ನಾಮಕರಣ ಮಾಡಿದರು. ಇವರಿಗೆ ಒಂದು ಸಂದರ್ಭದಲ್ಲಿ ಅಪಮೃತ್ಯು ಯೋಗ ಬಂದೊದಗಿತ್ತು.

ಶ್ರೀ ಗೋಪಾಲಾಚಾರ್ಯರಿಗೆ ಒಂದು ಸಂದರ್ಭದಲ್ಲಿ ತೀವ್ರ ಜ್ವರ ಪ್ರಾಪ್ತವಾಯಿತು. ಎಷ್ಟು ಪರಿಯಾಗಿ ಔಷಧ ಉಪಚಾರ ನಡೆದರೂ ಜ್ವರದ ತಾಪ ಕಡಿಮೆಯಾಗಲಿಲ್ಲ. ದಿನದಿಂದ ದಿನಕ್ಕೆ ಜ್ವರದ ಬಾಧೆ ಉಲ್ಬಣಿಸತೊಡಗಿತು. ತಮ್ಮ ಮಗನಿಗೆ ಬಂದಿರುವುದು ಅಪಮೃತ್ಯು ಎಂಬುದು ವೆಂಕಟರಾಮಾಚಾರ್ಯರಿಗೆ ಮನವರಿಕೆಯಾಯಿತು. ಅಪಮೃತ್ಯು ಪರಿಹಾರಕ್ಕೆ ವಿಶೇಷ ಜಪ ಇತ್ಯಾದಿಗಳನ್ನು ಮಾಡುವುದು ಅನಿವಾರ್ಯವೆಂದು ನಿರ್ಧರಿಸಿದ ಆಚಾರ್ಯರು ಧನ್ವಂತರಿ ಮಂತ್ರ, ಗ್ರಹಪೀಡಾ ನಿವಾರಕ ಮಂತ್ರಗಳು ಇತ್ಯಾದಿ ಅನೇಕ ಮಂತ್ರಗಳ ಜಪ ಮಾಡಲು ಶಿಷ್ಯರಿಗೆ ಆದೇಶ ನೀಡಿದರು. ಅವುಗಳಲ್ಲಿ ಅಪಮೃತ್ಯು ನಿವಾರಕವಾದ ಅತಿ ಉಗ್ರವಾದ ಶ್ರೀ ನರಸಿಂಹ ಮಂತ್ರದ ಜಪವನ್ನು ಮಾಡಲು ಯಾರೂ ತಯಾರಾಗಲಿಲ್ಲ. ಆ ಸಂದರ್ಭದಲ್ಲಿ ಜಯತೀರ್ಥರು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ಗುರು ಪುತ್ರನನ್ನುಳಿಸಲು ಮುಂದೆ ಬಂದರು. ಅಪಮೃತ್ಯು ಪರಿಹಾರಕ್ಕಾಗಿ ನರಸಿಂಹ ಮಂತ್ರದ ಜಪವನ್ನು ಮಾಡುವುದಾಗಿ ಸಂಕಲ್ಪಿಸಿದ ಜಯತೀರ್ಥಾಚಾರ್ಯರು ತುಂಗಭದ್ರೆಯ ಪ್ರವಾಹದ ಮಧ್ಯದ ನಡುಗಡ್ಡೆಯಲ್ಲಿದ್ದ ಮೂರು ಕಲ್ಲು ಗುಂಡುಗಳಿಂದ ಕೂಡಿದ ಒಂದು ಬಂಡೆಗಲ್ಲಿನ ಮೇಲೆ ಕುಳಿತು ಒಂದು ಸಪ್ತಾಹ ನರಸಿಂಹ ಮಂತ್ರವನ್ನು ಜಪಿಸತೊಡಗಿದರು. ಒಂದು ವಾರದ ಉಗ್ರ ತಪಶ್ಚರಣೆಯು ಮುಕ್ತಾಯವಾಯಿತು. ಅದು ವೈಶಾಖ ಮಾಸದ ಮಧ್ಯಾಹ್ನದ ಸುಡುವ ಬಿಸಿಲು ದಿನಗಳು. ಜಪವನ್ನು ಪೂರ್ಣಗೊಳಿಸಿದ ಜಯತೀರ್ಥಾಚಾರ್ಯರು ಜಪವನ್ನು ಗುರ್ವಂತರ್ಯಾಮಿ ನರಸಿಂಹನಿಗೆ ಸಮರ್ಪಣೆ ಮಾಡಿ ಗುರು ಪುತ್ರನ ಅಪಮೃತ್ಯುವನ್ನು ಪರಿಹರಿಸುವಂತೆ ಭಕ್ತಿಯಿಂದ ಪ್ರಾರ್ಥಿಸಿದರು. ತುಂಗಭದ್ರೆಯಲ್ಲಿ ತಮ್ಮ ನಿತ್ಯಾಹ್ನಿಕವನ್ನು ಮುಗಿಸಿಕೊಂಡು ಗುರುಗಳು ವೇಣೀಸೋಮಪುರದಲ್ಲಿ ಪ್ರತಿಷ್ಠಾಪನೆ ಮಾಡಿದ್ದ ಶ್ರೀ ವೇಣುಗೋಪಾಲ ಕೃಷ್ಣನ ದೇವಾಲಯವನ್ನು ಪ್ರವೇಶ ಮಾಡಿದರು. ಅಂದು ಜಪದ ಪೂರ್ತಿಯ ದಿವಸವಾದ್ದರಿಂದ ವೆಂಕಟರಾಮಾಚಾರ್ಯರ ಆದೇಶದಂತೆ ಕೃಷ್ಣನ ಅಭಿಷೇಕಕ್ಕೆ ಅರ್ಚಕರು ಹಾಲು, ಮೊಸರು, ತುಪ್ಪ, ಹಣ್ಣು, ಜೇನು, ಸಕ್ಕರೆ ಮುಂತಾದ ಪಂಚಾಮೃತ ಸಾಮಗ್ರಿಗಳನ್ನು ಸಿದ್ಧಪಡಿಸಿ ಇಟ್ಟಿದ್ದರು. ಒಂದು ವಾರದ ಉಗ್ರ ತಪಶ್ಚರ್ಯೆ ಮತ್ತು ಉಪವಾಸದಿಂದ ಬಳಲಿ ಬೆಂಡಾಗಿದ್ದ ಜಯತೀರ್ಥಾಚಾರ್ಯರ

ದೃಷ್ಟಿಗೆ ಪಂಚಾಮೃತ ಸಾಮಗ್ರಿಗಳು ಗೋಚರಿಸಿದವು. ಹಸಿವಿನಿಂದ ಬಳಲಿದ್ದ ಜಯತೀರ್ಥಾಚಾರ್ಯರು ಅವುಗಳನ್ನು ನಿತ್ಯತೃಪ್ತನಾದ, ಸರ್ವವ್ಯಾಪ್ತನಾದ, ತಮ್ಮ ಬಿಂಬಮೂರ್ತಿಗೆ ಮಾನಸಿಕವಾಗಿ ಸಮರ್ಪಿಸಿದರು. ಅವುಗಳನ್ನೆಲ್ಲ ಪಾನಮಾಡಿ ಅದೇ ಬಿಂಬನ ಪಂಚಾಮೃತ ಅಭಿಷೇಕವೆಂದು ಅನುಸಂಧಾನ ಮಾಡಿ ಅಲ್ಲಿಯೇ ಪಕ್ಕದಲ್ಲಿ ಮಲಗಿದರು. ಬಹಳ ಶ್ರಾಂತರಾಗಿದ್ದ ಜಯತೀರ್ಥರಿಗೆ ಗಾಢ ನಿದ್ರೆ ಆವರಿಸಿತು.

ಈ ಸಂದರ್ಭದಲ್ಲಿ ವೆಂಕಟರಾಮಾಚಾರ್ಯರು ಮನೆಯಲ್ಲಿ ಪಾಠ ಹೇಳುತ್ತ ಕುಳಿತಿದ್ದರು. ಇದ್ದಕ್ಕಿದ್ದಂತೆ ಆಚಾರ್ಯರು ಪಾಠವನ್ನು ನಿಲ್ಲಿಸಿ ಶಿಷ್ಯರಿಗೆ ಅಭಿಷೇಕ ಸೂಕ್ತಗಳನ್ನು ಹೇಳುವಂತೆ ಆದೇಶ ನೀಡಿದರು. ಎಲ್ಲರಿಗೂ ಪರಮಾಶ್ಚರ್ಯವಾಯಿತು. ಗುರುಗಳ ಆಜ್ಞೆಯಂತೆ ಅಭಿಷೇಕ ಸೂಕ್ತಗಳ ಪಾರಾಯಣ ಪೂರ್ತಿಯಾಯಿತು. ಆಚಾರ್ಯರು ಶಿಷ್ಯ ಪರಿವಾರದೊಡನೆ ದೇವಸ್ಥಾನಕ್ಕೆ ಹೊರಟರು. ದೇವಸ್ಥಾನದಲ್ಲಿ ಪಂಚಾಮೃತದ ಪಾತ್ರೆಗಳೆಲ್ಲ ಬರಿದಾಗಿದ್ದನ್ನು ನೋಡಿದ ವೆಂಕಟರಾಮಾಚಾರ್ಯರು ಪಂಚಾಮೃತ ಅಭಿಷೇಕವಾಗಿದೆ. ಮಂಗಳಾರತಿಯಾಗಲಿ ಎಂದರು. ಆದರೆ ದೇವಸ್ಥಾನದಲ್ಲಿದ್ದ ಕೆಲವರು ನಾವಿಲ್ಲೇ ಇದ್ದೇವಲ್ಲ ಯಾವ ಅಭಿಷೇಕವೂ ಆಗಿಲ್ಲ ಎಂದು ಗೊಣಗಿದರು. ಅವರನ್ನು ನೋಡಿ ಮುಗುಳ್ನಕ್ಕ ಆಚಾರ್ಯರು ಭಕ್ತಿಯಿಂದ ಕೃಷ್ಣನನ್ನು ಪ್ರಾರ್ಥಿಸಿ ನೀರಾಜನ ಮಾಡಿದರು. ಆಗ ಅಲ್ಲೊಂದು ಅತ್ಯಾಶ್ಚರ್ಯ ಘಟನೆ ನಡೆಯಿತು. ಅಘಟಿತವೆನಿಸುವ ಘಟನೆ ಅಲ್ಲಿ ಜರುಗಿತ್ತು . ಎಲ್ಲರೂ ನೋಡುತ್ತಿದ್ದ ಹಾಗೆಯೇ ಗೋಪಾಲಕೃಷ್ಣನ ಮುಖಾರವಿಂದದಿಂದ ಪಂಚಾಮೃತ ಹೊರಬರತೊಡಗಿತ್ತು ಪದಾರ್ಥಗಳೆಲ್ಲ ಮೊದಲಿದ್ದ ಹಾಗೆ ಬೇರೆ ಬೇರೆಯಾಗಿ ಪ್ರಕಟವಾದವು. ಆ ಹೊತ್ತಿಗೆ ಮಲಗಿದ ಜಯತೀರ್ಥಾಚಾರ್ಯರು ಎಚ್ಚೆತ್ತರು. ಗುರುಗಳನ್ನು ಕಂಡು ನಾಚಿಕೊಂಡು ನಮಸ್ಕರಿಸಿ ಕ್ಷಮೆ ಯಾಚಿಸಿದರು. ಶಿಷ್ಯನ ಸಿದ್ಧಿಯನ್ನು ಕಂಡ ಆಚಾರ್ಯರ ಹೃದಯ ತುಂಬಿ ಬಂದಿತು. ಆನಂದದಿಂದ ಶಿಷ್ಯನಿಗೆ ಪೂರ್ಣಾನುಗ್ರಹ ಮಾಡಿದರು. ನಂತರ ಗುರುಪುತ್ರರ ಅಪಮೃತ್ಯು ನಿವಾರಣೆಯಾಗಿ ಚೇತರಿಸಿಕೊಂಡರು.

ದೇವರಿಗೆ ಅಭಿಷೇಕ ಮಾಡಿದ ಪಂಚಾಮೃತ ಪಾನ ಮಾಡುವ ಜನರಿಂದಲೇ ತುಂಬಿದ ಪ್ರಪಂಚದಲ್ಲಿ ಜಯತೀರ್ಥರು ಮಾತ್ರ ಕೌಮಾರ್ಯದಲ್ಲಿಯೇ ತಾವು ಪಾನ ಮಾಡಿದ ಪಂಚಾಮೃತವನ್ನು ಕೃಷ್ಣನ ಬಾಯಿಂದ ತರಿಸುವ ಮೂಲಕ ಅಚ್ಚರಿ ಮೂಡಿಸಿದ್ದರು. ಅಲ್ಲದೇ ತಾವು ಸಾಮಾನ್ಯ ಪುರುಷರಲ್ಲ, ಸಜ್ಜನರ ಉದ್ಧಾರಕ್ಕಾಗಿ ಅವತರಿಸಿ ಬಂದ ದೈವೀ ಪುರುಷರು ಎಂದು ಪ್ರಕಟ ಪಡಿಸಿದ್ದರು. ತಮ್ಮ ಗ್ರಂಥಗಳಲ್ಲಿ

ಬಿಂಬಾನು ಸಂಧಾನದ ಅವಶ್ಯಕತೆಯನ್ನು ಒತ್ತಿ ಹೇಳಿದ ವಿಷ್ಣುತೀರ್ಥರು ಬಾಲ್ಯದಲ್ಲಿಯೇ ತಾವೆಂಥ ಉನ್ನತ ಮಟ್ಟದ ಬಿಂಬೋಪಾಸಕರು ಎಂಬುದನ್ನು ತೋರಿಸುವ ಮೂಲಕ ಬಿಂಬ ಪೂಜನದ ಮಹತ್ವವನ್ನು ಜಗತ್ತಿಗೆ ಸಾರಿದರು.

## ಅಸಾಧಾರಣ ಗುರುಭಕ್ತಿ

ಒಂದು ಸಂದರ್ಭದಲ್ಲಿ ವೆಂಕಟರಾಮಾಚಾರ್ಯರು ತಮ್ಮ ಭಕ್ತರೊಬ್ಬರ ಮನೆಯ ಶುಭ ಸಂದರ್ಭಕ್ಕಾಗಿ ಐಜಿ ಗ್ರಾಮಕ್ಕೆ ಹೋಗುವ ಪ್ರಸಂಗ ಬಂದಿತು. ವೇಣಿಸೋಮಪುರದಲ್ಲಿದ್ದ ಆಚಾರ್ಯರು ಮೊದಲೇ ತಮ್ಮ ಶಿಷ್ಯರೊಡನೆ ದೇವಪೂಜಾ ಸಾಮಗ್ರಿಗಳೆಲ್ಲವನ್ನು ಕೊಟ್ಟು ಕಳಿಸಿದರು. ನಂತರ ತಾವು ಸ್ನಾನ ಆಹ್ನಿಕಗಳನ್ನು ಮುಗಿಸಿಕೊಂಡು ಕುದುರೆಯೇರಿ ಐಜಿಗೆ ಹೊರಟರು. ಯಾವಾಗಲೂ ಗುರುಗಳ ಜೊತೆಯಲ್ಲೇ ಇರುತ್ತಿದ್ದ ಜಯತೀರ್ಥಾಚಾರ್ಯರು ಆಚಾರ್ಯರ ಜೊತೆಗೆ ನಡೆಯುತ್ತ ಹೊರಟರು. ಪಯಣದಲ್ಲೂ ತತ್ತ್ವ ಚಿಂತನೆ, ಭಗವಂತನ ಗುಣಗಳ ಅನುಸಂಧಾನ, ಶಾಸ್ತ್ರಾರ್ಥ ಚರ್ಚೆಗಳು ಸಾಗಿದ್ದವು. ಆಗ ವೈಶಾಖ ಮಾಸವಾಗಿತ್ತು . ಪ್ರಚಂಡ ಸೂರ್ಯನ ಕಿರಣಗಳು ಬಹುವಾಗಿ ಬಾಧಿಸತೊಡಗಿದವು. ಕಾಲ ಕೆಳಗಿನ ನೆಲ ಕಾಯ್ದು ಕಾವಲಿಯಂತಾಗಿತ್ತು . ಹೆಜ್ಜೆ ಇಡುವುದೇ ಕಠಿಣವಾಯಿತು. ಜಯತೀರ್ಥಾಚಾರ್ಯರು ಮಾತ್ರ ಇದಾವುದನ್ನೂ ಯೋಚಿಸದೇ ಹಸನ್ಮುಖಿಯಾಗಿ ಗುರುಗಳ ಹಿಂದೆ ನಡೆದು ಬರುತ್ತಿದ್ದಾರೆ. ಬಿರು ಬಿಸಿಲಿನಲ್ಲೂ ಭಕ್ತಿಯಿಂದ ತಮ್ಮನ್ನು ಅನುಸರಿಸಿ ಬರುತ್ತಿದ್ದ ಶಿಷ್ಯನನ್ನು ಕಂಡು ಮಮ್ಮಲ ಮರುಗಿದ ಆಚಾರ್ಯರು ಕರುಣೆಯಿಂದ ತಮ್ಮ ಪಾದಗಳಲ್ಲಿಯ ಪಾದರಕ್ಷೆಗಳನ್ನು ಜಯತೀರ್ಥಾಚಾರ್ಯರಿಗೆ ನೀಡಿ ಕಾಲಲ್ಲಿ ಧರಿಸಿಕೊಂಡು ಬರುವಂತೆ ಸೂಚಿಸಿದರು.

ಗುರುಗಳು ನೀಡಿದ ಪಾದರಕ್ಷೆಗಳನ್ನು ಜಯತೀರ್ಥಾಚಾರ್ಯರು ಭಕ್ತಿಯಿಂದ ಸ್ವೀಕರಿಸಿದರು. ಅತ್ಯಂತ ಉನ್ನತ ಮಟ್ಟದ ಜ್ಞಾನಿಗಳಾದ ಅವರಿಗೆ ಗುರುಗಳ ಹಿರಿಮೆ ತಿಳಿಯದ್ದಾಗಿರಲಿಲ್ಲ. ಗುರುಗಳ ಪಾದುಕೆಗಳನ್ನು ಕಾಲಲ್ಲಿ ಧರಿಸುವ ಮನಸ್ಸು ಅವರಿಗಾಗಲಿಲ್ಲ. ಸಂಸಾರ ಸಾಗರವನ್ನೇ ದಾಟಿಸುವ ನೌಕೆಯಂತಿರುವ ಗುರುಪಾದುಕೆಗಳನ್ನು ಅಲ್ಪ ಮಾರ್ಗದ ಪಯಣಕ್ಕೆ ಬಳಸುವುದು ಅನುಚಿತವೆಂದು ನಿರ್ಧರಿಸಿದ ಜಯತೀರ್ಥಾಚಾರ್ಯರು, ಪಾದುಕೆಗಳನ್ನು ಭಕ್ತಿಯಿಂದ ಕಣ್ಣಿಗೊತ್ತಿಕೊಂಡರು. ಅವುಗಳನ್ನು ತಮ್ಮ ಉತ್ತರೀಯದಲ್ಲಿ ಸುತ್ತಿ ತಲೆಯ ಮೇಲಿಟ್ಟುಕೊಂಡು ಗುರುಗಳ ಹಿಂದೆ ಹೆಜ್ಜೆ ಹಾಕಿದರು.

ಐಜಿ ಗ್ರಾಮ ತಲುಪಿದ ಆಚಾರ್ಯರು ಕುದುರೆಯಿಂದ ಇಳಿದು ಹಿಂತಿರುಗಿ ನೋಡುತ್ತಾರೆ. ಕಾಲಲ್ಲಿ ಧರಿಸಲು ನೀಡಿದ ತಮ್ಮ ಪಾದರಕ್ಷೆಗಳನ್ನು ಜಯತೀರ್ಥಾಚಾರ್ಯರು ತಲೆಯ ಮೇಲೆ ಧರಿಸಿಕೊಂಡು ಬರುತ್ತಿದ್ದಾರೆ. ಗುರುಗಳು ಕುದುರೆಯಿಂದ ಇಳಿದ ಕೂಡಲೇ ತಮ್ಮ ತಲೆಯ ಮೇಲಿದ್ದ ಪಾದರಕ್ಷೆಗಳನ್ನು ತೆಗೆದು ಗುರುಗಳ ಪಾದದ ಬಳಿ ಇಟ್ಟರು. ಗುರುಗಳು ಅವುಗಳನ್ನು ಧರಿಸಿಕೊಳ್ಳುತ್ತ ಏಕಪ್ಪಾ ಜಯತೀರ್ಥ ಪಾದರಕ್ಷೆಗಳನ್ನು ಹಾಕಿಕೊಳ್ಳದೇ ತಲೆಯ ಮೇಲೆ ಇಟ್ಟುಕೊಂಡು ಬಂದೆ ಎಂದರು. ಜಯತೀರ್ಥಾಚಾರ್ಯರು ಗುರುಗಳೇ ಗುರುಪಾದುಕೆಗಳ ಸ್ಥಾನ ಶಿರವೇ ಹೊರತು ಕಾಲುಗಳಲ್ಲ. ಅವುಗಳು ನನ್ನ ಶಿಬಿರದಲ್ಲಿರುವುದೇ ಭೂಷಣವೆಂದು ತಿಳಿದು ತಲೆಯ ಮೇಲಿಟ್ಟುಕೊಂಡು ಬಂದೆ. ಅವುಗಳು ನನ್ನ ಕಾಲಲ್ಲಿದ್ದರೆ ಕಾಲುಗಳು ಸುಡುವುದನ್ನಷ್ಟೇ ನಿವಾರಿಸಬಹುದಾಗಿತ್ತು. ಆದರೆ ನನ್ನ ತಲೆಯ ಮೇಲೆ ಇದ್ದುದರಿಂದ ನನ್ನ ಪೂರ್ಣ ಶರೀರವೇ ತಂಪಾಯಿತು. ಲೋಕವನ್ನೇ ತನ್ನ ಪ್ರಖರ ಬಿಸಿಲಿನಿಂದ ಸುಡುವ ಸೂರ್ಯನ ಬಿರು ಬಿಸಿಲು ಕೂಡ ಗುರು ಪಾದುಕೆಗಳನ್ನು ತಲೆಯ ಮೇಲೆ ಹೊತ್ತ ನನ್ನನ್ನು ಸ್ಪರ್ಶಿಸಲಾಗಲಿಲ್ಲ. ನಾನು ಹೆಜ್ಜೆ ಇಟ್ಟ ನೆಲವೆಲ್ಲ ನನಗೆ ತಂಪಾದ ಹಿತವಾದ ಅನುಭವವನ್ನೇ ನೀಡಿತು ಎಂದು ಹೇಳಿ ನಮಸ್ಕರಿಸಿದರು.

ಶಿಷ್ಯನ ವಿನಯ, ವಿವೇಕ, ಸಮಯಪ್ರಜ್ಞೆ ಗುರುಭಕ್ತಿಯನ್ನು ಕಂಡ ಗುರುಗಳು ಪರಮಾನಂದ ಭರಿತರಾದರು. ಹೃದಯತುಂಬಿ ಬಂದ ಅವರು ನೀನು ಭಾಗವತೋತ್ತಮರ ಶಿರೋರತ್ನವೆನಿಸಿ ಪ್ರಖ್ಯಾತನಾಗೂ, ನಮಗಿಂತಲೂ ಅಧಿಕ ಶಿಷ್ಯ ಸಂಪತ್ತು ಕೀರ್ತಿಗಳು ನಿನಗೆ ಲಭಿಸಲಿ ಎಂದು ಆಶೀರ್ವದಿಸಿದರು.

''**ಗುರ್ವನುಗ್ರಹ ರೂಪಾಂ ತಾಂ ಕಾಮಧೇನು ಮುಪಾಸ್ಮಹೆ**'' ಎಂದಂತೆ, ಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರರಾದ ಜಯತೀರ್ಥಾಚಾರ್ಯರು ಮುಂದೆ ಅನೇಕ ಪ್ರೌಢ ಗ್ರಂಥಗಳನ್ನು ರಚಿಸಿದರಷ್ಟೇ ಅಲ್ಲ. ಅನೇಕ ಜನ ಪ್ರಖ್ಯಾತ ವಿದ್ವಾಂಸರನ್ನು ತಯಾರು ಮಾಡಿ ನೂರಾರು ಬಾರಿ ಶ್ರೀಮನ್ನ್ಯಾಯಸುಧಾ ಮಂಗಳ ಮಾಡಿದರು. ಮುಂದೆ ಪರಮೋಚ್ಚವಾದ ವೈರಾಗ್ಯವನ್ನು ಪಡೆದು ಲೋಕವಿಲಕ್ಷಣ ರೀತಿಯಲ್ಲಿ ವಾನಪ್ರಸ್ಥವನ್ನು ಆಚರಿಸಿ ಅವಧೂತ ಶಿರೋರತ್ನ ಎಂದು ವಿಮಲ ಕೀರ್ತಿಯನ್ನು ಗಳಿಸಿದರು. ತುರೀಯಾಶ್ರಮವನ್ನು ಸ್ವೀಕರಿಸಿ ''ವಿಷ್ಣುತೀರ್ಥರೆಂದು'' ಪ್ರಖ್ಯಾತರಾದರು.

# ಧನ್ಯೋ ಗ್ರಹಸ್ಥಾಶ್ರಮಃ

ವಿದ್ಯೆ ಎಲ್ಲರಿಗೂ ದೊರಕುವುದಿಲ್ಲ. ವಿದ್ಯೆಯನ್ನು ಪಡೆದವರೆಲ್ಲ ಸಾಧಕರಾಗುವುದಿಲ್ಲ. ಸಾಧನೆಯನ್ನು ಮಾಡಿ, ಸಿದ್ಧಿಗಳನ್ನು ಪಡೆದವರೆಲ್ಲ ಆ ಸಿದ್ಧಿಗಳನ್ನು ಲೋಕ ಕಲ್ಯಾಣಕ್ಕಾಗಿ ಬಳಸುವುದಿಲ್ಲ. ಲೋಕ ಕಲ್ಯಾಣ ಮಾಡುವವರೆಲ್ಲ ಧನದಾಸೆಯನ್ನು ತೊರೆಯುವುದಿಲ್ಲ. ಧನದಾಸೆಯನ್ನು ತೊರೆದವರೂ ಕೂಡ ಕೀರ್ತಿ ಕಾಮನೆಯನ್ನು ಬಿಟ್ಟವರಲ್ಲ. ಈ ಎಲ್ಲ ಗುಣಗಳೂ ಒಬ್ಬನಲ್ಲೇ ಮೇಳೈಸುವುದು ಬಲು ಅಪರೂಪ. ಅನೇಕ ಜನ್ಮಗಳ ಪುಣ್ಯ ಪರಿಪಾಕಗೊಂಡು, ಸಂಸ್ಕಾರ ರೂಪದಲ್ಲಿ ಹರಿದು ಬಂದು, ವಿಶೇಷವಾದ ಭಗವಂತನ ಅನುಗ್ರಹಕ್ಕೆ ಪಾತ್ರರಾದ ಉತ್ತಮ ಚೇತನರಿಗೆ ಮಾತ್ರ ಇಂಥ ಗುಣಗಳಿರಲು ಸಾಧ್ಯ . ಜಯತೀರ್ಥರು ಇಂಥ ವಿರಳಾತಿವಿರಳ ಉತ್ತಮ ಚೇತನರಾಗಿದ್ದರು. ಅದಕ್ಕಾಗಿಯೇ ಅವರ ಮುಖಾಂತರ ಭಗವಂತ ತನ್ನ ಮಹಿಮೆಯನ್ನು ತೋರಿದ.

ಭಕ್ತಿಯಿಂದ ಗುರುಸೇವೆ ಮಾಡಿ ಗುರುಗಳ ಪ್ರೀತಿಗೆ ಪಾತ್ರರಾದ ಜಯತೀರ್ಥರು ಶ್ರದ್ಧೆಯಿಂದ ಅಧ್ಯಯನ ಮಾಡಿ ವಿಶೇಷ ವಿದ್ವತ್ತನ್ನು ಸಂಪಾದಿಸಿದರು. ನಿಷ್ಠೆಯಿಂದ ಬ್ರಹ್ಮಚರ್ಯಾಶ್ರಮವನ್ನು ಪಾಲಿಸಿ ವಿಶೇಷ ತೇಜಸ್ಸನ್ನು ಸಂಪಾದಿಸಿದ್ದರು. ಕೌಮಾರ್ಯದಲ್ಲಿ ಗುರುಗಳ ಸನ್ನಿಧಿಗೆ ಬಂದ ಜಯತೀರ್ಥ ಯೌವ್ವನದ ಹೊಸ್ತಿಲಿಗೆ ಬರುವಷ್ಟರಲ್ಲಿ ಸಕಲ ಶಾಸ್ತ್ರಗಳನ್ನು ತಲಸ್ಪರ್ಶಿ ಅಧ್ಯಯನ ಮಾಡಿ, ಜಯತೀರ್ಥಾಚಾರ್ಯರಾಗಿದ್ದರು. ''**ಛಂದಾಗಿ ಗುರುಗಳ ಮುಖದಿಂದ ಅಧ್ಯಯನ ಮಾಡಿ ವಂದಿಸಿ ಬೇಗ ತಾನು ಮುಂದೆ ಸಜ್ಜನರುದ್ಧಾರ ಮಾಡಬೇಕೆಂದು ಆಜ್ಞೆಯಕೊಂಡನು**''. ಅಧ್ಯಯನ ಪೂರೈಸಿದ ಜಯತೀರ್ಥಾಚಾರ್ಯರು ಭಕ್ತಿಯಿಂದ ಗುರುಗಳಿಗೆ ವಂದಿಸಿ ಗುರುಗಳ ಅನುಜ್ಞೆಯನ್ನು ಪಡೆದು ತಮ್ಮ ಊರಾದ ಸಿದ್ಧಾಪುರಕ್ಕೆ ಮರಳಿ ಬಂದರು.

ಉತ್ತಮ ವಿದ್ವಾಂಸನಾಗಿ ಮನೆಗೆ ಬಂದ ಮಗನನ್ನು ನೋಡಿದ ತಂದೆ ತಾಯಿಗಳು ಆನಂದ ತುಂದಿಲರಾದರು. ತಾರುಣ್ಯಾವಸ್ಥೆಗೆ ಕಾಲಿಟ್ಟಿರುವ ಮಗನಿಗೆ ಶೀಘ್ರವೇ ವಿವಾಹ ಮಾಡಬಯಸಿದ ಅವರು ಕುಲೀನಳೂ, ಸದ್ಗುಣ ಸಂಪನ್ನಳೂ ಆದ ಕನ್ಯೆಯನ್ನು ನೋಡಿ ಮಗನಿಗೆ ವಿವಾಹ ಮಾಡಿದರು. ಅನುರೂಪಳಾದ ಪತ್ನಿಯನ್ನು ಕೈ ಹಿಡಿದ ಜಯತೀರ್ಥಾಚಾರ್ಯರು ಗೃಹಸ್ಥಾಶ್ರಮವನ್ನು ಸ್ವೀಕರಿಸಿದರು.

ಸರ್ವರೀತಿಯಲ್ಲೂ ಅನುಕೂಲೆಯಾದ ಸತಿಯನ್ನು ಕೈ ಹಿಡಿದ ಆಚಾರ್ಯರ ಸಂಸಾರ ನೌಕೆ ಹಿತವಾಗಿಯೇ ತೇಲುತ್ತಿತ್ತು. ಸ್ವಭಾವತಃ ಧರ್ಮನಿಷ್ಠರಾಗಿದ್ದ ಜಯತೀರ್ಥಾಚಾರ್ಯರು ಗಾರ್ಹಸ್ಥ್ಯವೂ ಭಗವಂತನೊಲುಮೆಯ ಸೋಪಾನ-ವೆಂದಿರತವರು. ಸಂಸಾರವನ್ನು ಕಂಸಾರಿಯನ್ನೊಲಿಸುವ ಸಾಧನವಾಗಿಸಿದವರು. ಗೃಹಸ್ಥೋಚಿತವಾದ ಸತ್ಕರ್ಮಗಳನ್ನು ನಿಷ್ಠೆಯಿಂದ ಆಚರಿಸುತ್ತಲೇ ವಿಶೇಷ ಪಾಠ ಪ್ರವಚನರತರಾಗಿದ್ದರು.

ನಿರಂತರ ವೇದ ಶಾಸ್ತ್ರಗಳ ಅಧ್ಯಯನದಿಂದ ಋಷಿಋಣವನ್ನು ಹಾಗೂ ದೇವತಾರ್ಚನೆಯಿಂದ ದೇವಋಣವನ್ನು ಪರಿಹರಿಸಿಕೊಂಡಿದ್ದ ಅವರಿಗೆ ಪಿತೃಋಣದಿಂದ ಮುಕ್ತರಾಗುವ ಯೋಗವೂ ಕೂಡಿ ಬಂದಿತು. ಸಾರ್ಥಕ ಗಾರ್ಹಸ್ಥ್ಯದ ಕುರುಹಾಗಿ ಸತ್ಪುತ್ರನೊಬ್ಬನ ಜನನವಾಯಿತು. ಗೋಪಾಲಕೃಷ್ಣನ ಒಲುಮೆಗೆ ಪಾತ್ರರಾದ ಜಯತೀರ್ಥಚಾರ್ಯರು ತಮ್ಮ ಮಗನಿಗೆ ಕೃಷ್ಣಾಚಾರ್ಯ ಎಂದೇ ನಾಮಕರಣ ಮಾಡಿದರು.

(ಮುಂದೆ ಕೃಷ್ಣಾರ್ಯರೆಂದೇ ಪ್ರಸಿದ್ಧರಾದ ಇವರು ತಂದೆಗೆ ತಕ್ಕ ಮಕ್ಕಳು. ಉದ್ದಾಮ ಪಂಡಿತರೂ ಶ್ರೇಷ್ಠ ಗ್ರಂಥಕರ್ತೃಗಳೂ, ಉತ್ತಮ ಕವಿಗಳೂ, ಪ್ರಸಿದ್ಧ ಟಿಪ್ಪಣಿಕಾರರೂ ಆಗಿದ್ದ ಇವರು ಶ್ರೀಮನ್ನ್ಯಾಯಸುಧೆಗೆ ಲಘು ಸುಧಾರಸರಂಜಿನೀ, ಅಲ್ಲದೇ ತತ್ವ ಪ್ರಕಾಶಿಕಾ ಟಿಪ್ಪಣೀ ಇತ್ಯಾದಿಗಳನ್ನು ಬರೆಯುವ ಮೂಲಕ ಟಿಪ್ಪಣೀಕಾರರ ಸಾಲಿನಲ್ಲಿ ಗುರುತಿಸಿಕೊಂಡಿದ್ದಾರೆ. ವಿಷ್ಣುತೀರ್ಥರನ್ನು ಕುರಿತ 59 ಪದ್ಯಗಳಿಂದ ಕೂಡಿದ ಗುರುಸ್ತೋತ್ರವೊಂದನ್ನು ರಚಿಸಿದ್ದು, ಆಪಾದಮೌಲಿ ಪರ್ಯಂತವಾಗಿ ವಿಷ್ಣುತೀರ್ಥರನ್ನು ವರ್ಣಿಸುವ ಸ್ತೋತ್ರವು ತುಂಬಾ ಹೃದ್ಯವೂ, ಮನೋಹರವೂ ಆಗಿದೆ. ಅಲ್ಲದೇ ವಿಷ್ಣುತೀರ್ಥರು ರಚಿಸಿದ ಎಂಟು ಶ್ಲೋಕಗಳ ನ್ಯಾಯಸುಧಾ ಸ್ತೋತ್ರದ ಪ್ರೌಢವಾದ ವ್ಯಾಖ್ಯಾನವೊಂದನ್ನು ರಚಿಸಿದ್ದು, ಅದು ವಿಶ್ವಮಧ್ವ ಮಹಾಪರಿಷತ್‌ನಿಂದ ಪ್ರಕಟವಾಗಿದೆ. ಆ ಗ್ರಂಥದ ಮುನ್ನುಡಿಯಲ್ಲಿ ಕೃಷ್ಣಾಚಾರ್ಯರನ್ನು ವಿಷ್ಣುತೀರ್ಥರ ಶಿಷ್ಯರೆಂದು ಹೇಳಲಾಗಿದೆ. ಕೃಷ್ಣಾಚಾರ್ಯರು ಕೇವಲ ವಿಷ್ಣುತೀರ್ಥರ ಶಿಷ್ಯರಷ್ಟೇ ಅಲ್ಲದೇ ಸಾಕ್ಷಾತ್ತಾಗಿ ಪೂರ್ವಾಶ್ರಮದ ಪುತ್ರರೇ ಆಗಿದ್ದಾರೆ. **ವಿಷ್ಣುತೀರ್ಥರನ್ನು ಕುರಿತ ಐದು ರತ್ನ(ಸರ್ಗ)ಗಳಿಂದ ಕೂಡಿ 240 ಶ್ಲೋಕಗಳ** ಪಂಚರತ್ನವೆಂಬ ಕೃತಿಯೊಂದು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದ್ದು ಅದನ್ನು ಕೃಷ್ಣಾರ್ಯರೇ ರಚಿಸಿದ್ದಾರೆಂದು ಶ್ರೀ ಜಯಸಿಂಹ (ತಿರುಮಲೇಶ ಹರಿ ವಿಠಲ)

ಅವರು ಅಭಿಪ್ರಾಯ ಪಡುತ್ತಾರೆ. (ಶ್ರೀ ವಿಷ್ಣುತೀರ್ಥ ದರ್ಶಭ ಪುಟ 46) ವಾಸ್ತವವಾಗಿ ಅದು ಟೋಣಪಿ ಬಾಳಾಚಾರ್ಯರ ಮಕ್ಕಳಾದ ಅಣ್ಣಯ್ಯಾಚಾರ್ಯರ ರಚನೆಯಾಗಿದ್ದು, ಕೃಷ್ಣಾಚಾರ್ಯರು ಪಂಚರತ್ನಕ್ಕೆ ಪ್ರಭಾ ಎಂಬ ಹೆಸರಿನ ವ್ಯಾಖ್ಯಾನ ರಚಿಸಿದ್ದಾರೆ.

ಈ ಸಂಸ್ಕೃತ ಪಂಚರತ್ನವನ್ನೇ ಆಧರಿಸಿ ವಿಷ್ಣುತೀರ್ಥರ ಮೇಲೆ ಅನೇಕ ಸ್ತೋತ್ರ, ಪದ್ಯಗಳು, ಪರಾಕುಗಳನ್ನು ರಚಿಸಿದ ಅನಂತಾದ್ರೀಶರೆಂಬ ಅಂಕಿತದಿಂದ ಪ್ರಸಿದ್ಧರಾದ ಗೋಕಾವಿ ಭೀಮಾಚಾರ್ಯರು ಸುಮಾರು 800 ಪದ್ಯಗಳಿಂದ ಕೂಡಿದ ಕನ್ನಡ ಪಂಚರತ್ನವನ್ನು ರಚಿಸಿದ್ದು ಅದು ಪ್ರಕಟವಾಗಿದೆ).

(ಸರ್ವಜ್ಞಕಲ್ಪರಾದ ಟೀಕಾಕೃತ್ಪಾದರನ್ನು ಕುರಿತು ಜಯತೀರ್ಥರು ಎಂಬ ಕೃತಿಯನ್ನು ರಚಿಸಿದ ಕೊರಟಿ ಶ್ರೀನಿವಾಸರಾವ್ ಅವರು ವಿಷ್ಣುತೀರ್ಥರಿಗೆ ಇಬ್ಬರು ಪತ್ನಿಯರೆಂದು ಅಭಿಪ್ರಾಯ ಪಡುತ್ತಾರೆ. ಪೂರ್ವಾಶ್ರಮದಲ್ಲಿ ಜಯತೀರ್ಥರೆಂದು ಹೆಸರು ಪಡೆದಿದ್ದ ಅಡವಿ ಆಚಾರ್ಯರಿಗೆ ಇಬ್ಬರು ಪತ್ನಿಯರು ಇದ್ದುದರಿಂದ ಇಂಥ ತಪ್ಪು ಕಲ್ಪನೆ ಟೀಕಾಕೃತ್ಪಾದರ ಬಗ್ಗೆ ಬಂದಿರಲು ಸಾಕು.

ಕೃತಿ - ಜಯತೀರ್ಥರು - ಲೇಖಕರು - ಕೊರಟಿ ಶ್ರೀನಿವಾಸರಾವ ಪುಟ 265

ಟೀಕಾಕೃತ್ಪಾದರಿಗೆ ಒಬ್ಬರೇ ಪತ್ನಿಯಿದ್ದರೆಂದು ಸಾಧಿಸುವ ಭರದಲ್ಲಿ ಕೊರಟಿ ಶ್ರೀನಿವಾಸರಾಯರು ಅಡವಿ ಆಚಾರ್ಯರಿಗೆ ಇಬ್ಬರು ಪತ್ನಿಯರಿದ್ದರೆಂದು ಕಲ್ಪನೆ ಮಾಡಿದ್ದಾರೆ. ಆಶ್ಚರ್ಯವೆಂದರೆ ವಿಷ್ಣುತೀರ್ಥರನ್ನು ಕುರಿತ ಸಂಸ್ಕೃತ ಪಂಚರತ್ನದಲ್ಲಿಯಾಗಲಿ ಅವರ ಮಕ್ಕಳೇ ಬರೆದ ಪ್ರಭಾ ವ್ಯಾಖ್ಯಾನದಲ್ಲಿಯಾಗಲೀ, ಗೋಕಾವಿ ಅನಂತಾದ್ರೀಶರ ವಿಸ್ತಾರವಾದ ಕನ್ನಡ ಪಂಚರತ್ನದಲ್ಲಿಯಾಗಲಿ ಬೇರಾವುದೇ ಸ್ತೋತ್ರಗಳಲ್ಲಾಗಲೀ ಅವರ ಪತ್ನಿಯ ಹೆಸರಾಗಲೀ ಅಥವಾ ಬೇರಾವ ವಿವರಗಳಾಗಲೀ ಬಂದಿಲ್ಲ. ಕೃಷ್ಣಾರ್ಯರು ತಮ್ಮ ತಾಯಿಯ ವಿವರಗಳನ್ನು ಉಲ್ಲೇಖಿಸದಿರುವುದು ಇನ್ನೂ ಆಶ್ಚರ್ಯ. ವಿಷ್ಣುತೀರ್ಥರನ್ನೇ ವಿಶೇಷವಾಗಿ ವರ್ಣಿಸಬೇಕೆಂಬ ಗುರುಭಕ್ತಿಯೇ ಇದಕ್ಕೆ ಕಾರಣವಾಗಿರಬಹುದು. ಒಬ್ಬ ಪತ್ನಿಯ ವಿವರಗಳೇ ಅಲಭ್ಯವಾಗಿರುವಾಗ ಇಬ್ಬರು ಪತ್ನೀಯರ ಕಲ್ಪನೆ ಬಾಲಿಶವಾದುದು. ಅಲ್ಲದೇ ವಿಷ್ಣುತೀರ್ಥರ ಕಾಲ ಹದಿನೇಳನೇ ಶತಮಾನದ ಉತ್ತರಾರ್ಧ ಆದುದರಿಂದ ವಿಷ್ಣುತೀರ್ಥರನ್ನು ನೋಡಿ ಜಯತೀರ್ಥರ ಬಗ್ಗೆ ತಪ್ಪು ಕಲ್ಪನೆ ಬರುವ ಯಾವ ಅವಕಾಶವೂ ಇಲ್ಲ ''ರಾಜಾನೋ ಬಹು ವಲ್ಲಭಾಃ'' ಎಂಬಂತೆ ಭಾವಿ ರಾಜ್ಯಾಧಿಕಾರಿಯಾಗಿದ್ದ ಜಯತೀರ್ಥರು ಇಬ್ಬರು ಪತ್ನಿಯರನ್ನು ಹೊಂದಿರಲು ಸಾಧ್ಯ . ಆದುದರಿಂದ ಈ ಕಲ್ಪನೆ ನಿರಾಧಾರವಾದುದು.

ವಿಷ್ಣುತೀರ್ಥರಿಗೆ ಐವರು ಮಕ್ಕಳು ಎಂಬುದಾಗಿಯೂ ಅನೇಕ ಕಡೆಗೆ ತಪ್ಪಾಗಿ ಬರೆಯಲಾಗಿದೆ. ಶ್ರೀ ಶಾಮರಾವ್ ಬಂಡೇರಾವ್ ಗಜೇಂದ್ರಗಡ ಅವರು ತಮ್ಮ ಭಾಗವತ ಸಾರೋದ್ಧಾರದ ಮುನ್ನುಡಿಯಲ್ಲಿ (ಪುಟ 13 ರಲ್ಲಿ) ತಮ್ಮ ಐವರು ಮಕ್ಕಳಲ್ಲಿ ಒಬ್ಬರಿಗೆ ಅಪಮೃತ್ಯುವಿದೆ ಅದರ ನಿವಾರಣೆಗಾಗಿ ನೀವೆಲ್ಲರೂ ಉಪವಾಸ ಮಾಡಿ ಶ್ರೀಶನ ಅನುಗ್ರಹ ಪಡೆಯಬೇಕು ಎಂದು ಹೇಳಿದರು ಎಂಬುದಾಗಿ ಬರೆದಿದ್ದಾರೆ. ಪ್ರಕಾಶನ ವ್ಯಾಸತತ್ವಜ್ಞ ಪ್ರತಿಷ್ಠಾನ. ಅಲ್ಲದೇ ಬೆಂಗಳೂರಿನ ನಾರಾಯಣಚಾರ್ ಪೂಜಾ ಭಂಡಾರ ಇವರು ಪ್ರಕಾಶನ ಮಾಡಿದ ಭಾಗವತ ಸಾರೋದ್ಧಾರದಲ್ಲೂ ವಿಷ್ಣುತೀರ್ಥರಿಗೆ ಐವರು ಪುತ್ರರೆಂದು ಉಲ್ಲೇಖಿಸಲಾಗಿದೆ. ತಮ್ಮ ಐವರು ಮಕ್ಕಳಲ್ಲಿ ಒಬ್ಬನಿಗೆ ಅಪಮೃತ್ಯುವಿದೆ ಎಂಬುದನ್ನು ತಮ್ಮ ದಿವ್ಯ ದೃಷ್ಟಿಯಿಂದ ಮನಗಂಡು ಆ ದಿವಸ ಉಪವಾಸ ಮಾಡಲು ಶಿಷ್ಯರಿಗೆ ತಿಳಿ ಹೇಳಿದರು.

(ಭಾಗವತ ಸಾರೋದ್ಧಾರ ಪುಟ ಸಂಖ್ಯೆ 6 ಪ್ರಕಾಶನ ನಾರಾಯಣಾಚಾರ್ ಪೂಜಾ ಭಂಡಾರ, ಬೆಂಗಳೂರು. ಅದೇ ಪುಸ್ತಕ ಹಿಂಬದಿಯ ರಕ್ಷಾ ಕವಚದಲ್ಲಿ ವಿಷ್ಣುತೀರ್ಥರ ವಂಶಾವಳಿಯನ್ನು ಮುದ್ರಿಸಲಾಗಿದ್ದು, ಅದರಲ್ಲಿ ವಿಷ್ಣುತೀರ್ಥರಿಗೆ ಒಬ್ಬರೇ ಪುತ್ರರೆಂದು (ಕೃಷ್ಣಾಚಾರ್ಯರು) ತೋರಿಸಲಾಗಿದೆ. ತಮ್ಮ ಐದಾರು ಜನ ಶಿಷ್ಯರ ಮಧ್ಯದಲ್ಲಿ ಒಬ್ಬನಿಗೆ ಅಪಮೃತ್ಯುವಿದೆ ಎಂಬ ಪಂಚರತ್ನ ಪ್ರಭಾವ ವಾಕ್ಯಗಳನ್ನೇ ತಪ್ಪಾಗಿ ಅರ್ಥೈಸಿ ಈ ರೀತಿ ಬರೆದಿರಲು ಸಾಕು. ನಮ್ಮ ಮನೆತನದಲ್ಲಿ ಉಪಲಬ್ಧವಿರುವ ವಂಶವೃಕ್ಷದಲ್ಲಿಯಾಗಲೀ, ಯಾವುದೇ ಪ್ರಾಚೀನ ಗ್ರಂಥಗಳಲ್ಲಾಗಲೀ ಐವರು ಮಕ್ಕಳಿರುವ ಕುರಿತು ಯಾವುದೇ ರೀತಿಯ ಉಲ್ಲೇಖವೂ ದೊರಕುವುದಿಲ್ಲ.)

ಹೀಗೆ ಮನ ಮೆಚ್ಚಿದ ಮಡದಿ ಮುದ್ದಾದ ಮಗು ಅಗಾಧ ವಿದ್ಯೆ, ಅತಿಶಯ ಸಂಪತ್ತು, ವಿಮಲಕೀರ್ತಿಗಳಾದ ಯುಕ್ತರಾಗಿ ಜಯತೀರ್ಥರು ಶಾಸ್ತ್ರೋಕ್ತ ರೀತಿಯಲ್ಲಿ ಸಾರ್ಥಕ ಜೀವನವನ್ನು ನಡೆಸುತ್ತಿದ್ದರು. ಪಂಚಯಜ್ಞ ಪರಾಯಣರಾದ ಅವರು ಧನ್ಯೋಗ್ರಹಸ್ಥಾಶ್ರಮಃ ಎಂಬ ಉಕ್ತಿಗೆ ನಿದರ್ಶನರಾಗಿದ್ದರು.

## ಮಂಚಬಾರದು ಮಡದಿ ಬಾರಳು

ಸಾಮಾನ್ಯರ ದೃಷ್ಟಿಯಲ್ಲಿ ಮಹಾಸಾಧನೆ ಎನ್ನಿಸುವ ರೀತಿಯಲ್ಲಿ ಜಯತೀರ್ಥಾಚಾರ್ಯರು ಬದುಕುತ್ತಿದ್ದರು. ಆದರೆ ಭಗವಂತನಿಗೆ ಇದು

ತೃಪ್ತಿಯಾಗಲಿಲ್ಲ. ಟೀಕಾಕೃತ್ಪಾದರ ವಿಶೇಷ ಸೇವೆಗಾಗಿ ಅವತರಿಸಿದ ಅವರ ಕಾರ್ಯ ಬೇರೆಯೇ ಆಗಿತ್ತು. ಅವರನ್ನು ಎಚ್ಚರಿಸಲು ಭಗವಂತ ಇಚ್ಛೆ ಮಾಡಿದ. ಅದಕ್ಕೆ ಬೇಕಾದ ರೀತಿಯಲ್ಲಿ ವೇದಿಕೆಯನ್ನು ಸಿದ್ಧಗೊಳಿಸಿದ.

ಅದೊಂದು ದಿನ ಬೆಳಗಿನಿಂದ ಪಾಠ, ಪ್ರವಚನಗಳು, ಆಹ್ನಿಕ, ದೇವತಾರ್ಚನೆ, ವೈಶ್ವದೇವಾದಿಗಳನ್ನು ಮುಗಿಸಿದ ಆಚಾರ್ಯರು ಭೋಜನ ಸ್ವೀಕರಿಸಿದರು. ಬಿಡುವಿಲ್ಲದ ಕಾರ್ಯಗಳಿಂದ ದಣಿದ ಆಚಾರ್ಯರು ಆಯಾಸ ಪರಿಹಾರಕ್ಕಾಗಿ ಭೋಜನಾನಂತರ ಹೀಗೆ ಒರಗಿದ್ದಾರೆ. ಸುತ್ತಲೂ ನಿಲುವುಗನ್ನಡಿಗಳು, ಬಗೆ ಬಗೆಯ ಸುಂದರ ವರ್ಣ ಚಿತ್ರಗಳಿಂದ ಕೂಡಿದ ಶಯ್ಯಾಗೃಹ, ಸಾಕಷ್ಟು ಸ್ಥಿತಿವಂತರಾಗಿದ್ದ ಆಚಾರ್ಯರ ಶಯ್ಯಾಗೃಹವೂ ವೈಭವೋಪೇತವಾಗಿಯೇ ಇತ್ತು. ಪಾದತಲದಲ್ಲಿ ಕುಳಿತ ಪತ್ನಿ ಪಾದಗಳನ್ನು ಮೆಲ್ಲನೆ ಒತ್ತುತ್ತ ಪತಿ ಸೇವೆಯಲ್ಲಿ ಮಗ್ನರಾಗಿದ್ದಾರೆ. ಭಗವದಿಚ್ಛೆ ಈ ಎಲ್ಲ ವೈಭವಗಳಿಗೆ ಅಂದೇ ಕೊನೆಯ ದಿನವಾಗಿತ್ತು.

ಇದೇ ವೇಳೆಯಲ್ಲಿ ಬಾಗಿಲಿನಲ್ಲಿ ಭಿಕ್ಷೆಗಾಗಿ ಬಂದ ದಾಸಯ್ಯನೊಬ್ಬ ಪುರಂದರದಾಸರ ಈ ಪದವನ್ನು ಸುಶ್ರಾವ್ಯವಾಗಿ ಹಾಡತೊಡಗಿದ್ದ.

**ಮಂಚಬಾರದು ಮಡದಿ ಬಾರಳು ಕಂಡು ಕನ್ನಡಿ**
**ಬಾರದು, ಸಂಚಿತಾರ್ಥ ದ್ರವ್ಯ ಬಾರದು ಮುಂಚೆ**
**ಮಾಡಿರೋ ಧರ್ಮವ**

ಗಾಳಿಯಲ್ಲಿ ತೇಲುತ್ತ ಬಂದ ಮಧುರವಾದ ಗಾನವು ಆಚಾರ್ಯರ ಕಿವಿಯ ಮೇಲೆ ಬಿತ್ತು ಕೂತೂಹಲಿಗಳಾದ ಆಚಾರ್ಯರು ಆಸಕ್ತಿಯಿಂದ ಪದವನ್ನು ಆಲಿಸಿದರು. ಕಿವಿ ಸೇರಿದ ಹಾಡು ಮನವನ್ನು ಮುಟ್ಟಿತು. ಹೃದಯವನ್ನು ತಟ್ಟಿತು. ಸುತ್ತಲೂ ನೋಡುತ್ತಾರೆ. ಮಂಚದ ಮೇಲೆ ತಾವು, ಸುತ್ತಲೂ ಕನ್ನಡಿಗಳು, ಕಾಲ ಬಳಿಯಲ್ಲಿ ಮುದ್ದಿನ ಮಡದಿ, ಹಾಡಿನ ಪದ ಪದವೂ ತನ್ನನ್ನೇ ಉದ್ದೇಶಿಸಿದಂತೆ ತೋರಿತು. ಮೈಯಲ್ಲಿ ಮಿಂಚಿನ ಸಂಚಾರವಾಯಿತು. ಟೀಕಾಚಾರ್ಯರ ಆದೇಶ ನೆನಪಾಯಿತು. ಮುಂದಿನ ದಾರಿ ಸ್ಪಷ್ಟವಾಯಿತು. ''ಕಿಂಪಶುಃಪೂರ್ವದೇಹೇ'' ಎಂಬ ಅಕ್ಷೋಭ್ಯತೀರ್ಥರ ಮಾತನ್ನು ಕೇಳಿದ ಧೋಂಡೋಪಂತನಂತಾಯಿತು ಅವರ ಸ್ಥಿತಿ. ತಾವ್ಯಾರು ತಮ್ಮ ಅವತಾರದ ಉದ್ದೇಶವೇನು ಈಗ ಮಾಡುತ್ತಿರುವುದೇನು ಎಂದು ತಮ್ಮನ್ನು ತಾವೇ ಕೇಳಿಕೊಂಡರು. ಆತ್ಮ ವಿಮರ್ಶೆಗೆ ಹಚ್ಚಿದ ವೈಚಾರಿಕ ಪ್ರಜ್ಞೆ ಜಾಗೃತವಾಯಿತು. ಸುಪ್ತವಾಗಿದ್ದ ಅವರ ಅನೇಕ ಜನ್ಮಗಳ ಸಾಧನೆಯು ವೈರಾಗ್ಯದ

ರೂಪ ತಾಳಿತು. ಇಲ್ಲಿಯವರೆಗೆ ಭೋಗ ಸಾಧನಗಳಾಗಿ ಅತ್ಯಂತ ಪ್ರಿಯವಾಗಿದ್ದ ಪದಾರ್ಥಗಳೆಲ್ಲ ತಮ್ಮನ್ನು ಕಟ್ಟಿಹಾಕಿದ ಸರಪಳಿಯಾಗಿ ತೋರಿದವು. ಆ ಸರಪಳಿಗಳನ್ನು ಕಿತ್ತೊಗೆದು ಬಂಧ ಮುಕ್ತನಾಗಿ ಮುಕ್ತಿಪ್ರದ ಭಗವಂತನ ಸೇವೆಯಲ್ಲಿ ತೊಡಗುವ ನಿರ್ಧಾರ ಮಾಡಿದರು.

ಮಂಚದಿಂದ ಕೆಳಗಿಳಿದ ಆಚಾರ್ಯರು ಸಾಧನೆಯ ಪಥದಲ್ಲಿ ಮೇಲೇರಿದರು. ಹೊರಗೆ ಬಂದು ಆ ದಾಸಯ್ಯನನ್ನು ಕರೆದು ಮತ್ತೆ ಹಾಡಿಸಿ ಕೇಳಿದರು. ಆ ದಾಸಯ್ಯನಿಗೆ ತೃಪ್ತಿಯಾಗುವಂತೆ ಧಾನ್ಯ ವಸ್ತ್ರಗಳನ್ನು ನೀಡಿ ಕಳಿಸಿದರು. ತಾವು ಸರ್ವಸ್ವ ದಾನ ಮಾಡಿ, ವಿರಕ್ತರಾಗಿ ಹೊರಡುವುದಾಗಿ ಹೆಂಡತಿಗೆ ಹೇಳಿದರು. ಪತಿಯನ್ನೇ ಸರ್ವಸ್ವವೆಂದು ನಂಬಿದ ಆ ಸಾಧ್ವಿ ಶಿರೋಮಣಿಯು ತಾನೂ ಪತಿಯನ್ನು ಹಿಂಬಾಲಿಸುವುದಾಗಿ ಹೇಳಿದಳು. ತಮ್ಮದೆನ್ನುವ ಸರ್ವಸ್ವವನ್ನು ಕೃಷ್ಣಾರ್ಪಣವೆಂದು ದಾನ ಮಾಡಿ ಏಕೈಕ ಪುತ್ರ ಹಾಗೂ ಹೆಂಡತಿಯೊಡನೆ ಪೊಡವಿಗೊಡೆಯನನ್ನು ನೆನೆಸುತ್ತ ಅಡವಿಯತ್ತ ನಡೆದರು.

ಜಯತೀರ್ಥಾಚಾರ್ಯರ ಜೀವನದ ಈ ಘಟನೆಯು ತುಂಬಾ ಮಹತ್ವಪೂರ್ಣವಾದುದು. ಶಾಸ್ತ್ರಗಳು ನಿರೂಪಿಸುವ ಸಂಸ್ಕಾರಗಳ ವಿಷಯದಲ್ಲಿ ಅತ್ಯಂತ ಖಚಿತ ಉತ್ತರ ನೀಡುವ ಉದಾಹರಣೆಯಾಗಿಯೂ ಈ ಘಟನೆ ತುಂಬ ಗಮನಾರ್ಹವಾದುದು. ಮೇಲಿಂದ ಮೇಲೆ ಇಂಥ ಪದಗಳನ್ನು ಹಾಡುವ ಕೇಳುವ ಜನಗಳ ಮೇಲೆ ಯಾವ ಪರಿಣಾಮ ಬೀರದ ಇಂಥ ಮಾತುಗಳು ಜಯತೀರ್ಥಾಚಾರ್ಯರಂತಹ ಸಾತ್ವಿಕ ಚೇತನಗಳ ಮೇಲೆ ಬೀರುವ ಪರಿಣಾಮ ಅಗಾಧವಾದದ್ದು. ಅದಕ್ಕೆ ಅಂಥವರ ಅನೇಕ ಜನ್ಮಗಳ ಶುದ್ಧ ಸಂಸ್ಕಾರವೇ ಕಾರಣ. ಈ ಸಂಸ್ಕಾರವು ಅತಿ ಬಲಶಾಲಿಯಾದುದು ಬ್ರಹ್ಮಾದಿ ದೇವತೆಗಳೂ ಸಂಸ್ಕಾರವಶರಾಗಿದ್ದಾರೆ.

''**ಸಂಸ್ಕಾರೋ ಬಲವಾನೇವ ಬ್ರಹ್ಮಾದ್ಯಾ ಅಪಿ ತದ್ವಶಾಃ**'' ಮಧ್ವಾಚಾರ್ಯರು ಗೀತಾಭಾಷ್ಯ .

ಉತ್ತಮ ಸಂಸ್ಕಾರಗಳನ್ನು ಪಡೆದುಕೊಳ್ಳಬೇಕೆಂಬ ಶಾಸ್ತ್ರದ ಮಾತಿಗೆ ಸ್ಪಷ್ಟ ನಿದರ್ಶನವಾಗಿದೆ. ಈ ಘಟನೆ ಅವರ ವೈರಾಗ್ಯದ ರೀತಿಯೂ ಅಸಾಧಾರಣವಾದದ್ದು. ಮನ ಮೆಚ್ಚಿದ ಸತಿ, ಮುದ್ದಿನ ಸುತ, ಅಪಾರವಿತ್ತ, ವಿಶಾಲ ಕ್ಷೇತ್ರಗಳನ್ನು ತುಂಬು ಯೌವನದಲ್ಲಿಯೇ ಕ್ಷಣಾರ್ಧದಲ್ಲಿ ತ್ಯಾಗ ಮಾಡಿದ ಅವರ ವಿರಕ್ತಿ ಸಾಧನೆಯ

ಅದ್ಭುತಗಳಲ್ಲೊಂದು. ಟೀಕಾಚಾರ್ಯರ ವೈರಾಗ್ಯವನ್ನು ಹೋಲುವಂಥದು ಹನುಮಂತನ ವಿರಕ್ತಿಯನ್ನು ನೆನಪಿಸುವಂತಹುದು. ''ತದಲಂ ಬಹು ಲೋಕ ವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ'' ಲೋಕದ ಚಿಂತೆಯನ್ನು ಬಿಟ್ಟು ಭಗವಂತನ ಪಾದಗಳಲ್ಲಿ ಮನಸ್ಸನ್ನು ತೊಡಗಿಸಿರಿ ಎಂಬ ಆಚಾರ್ಯರ ವಾಣಿಯನ್ನು ಓದಿ ತಿಳಿದಿದ್ದ ಅವರಿಗೆ ಅಂಥ ವೈರಾಗ್ಯ ಬಂದದ್ದು. ಆಚಾರ್ಯರ ಶಾಸ್ತ್ರದಲ್ಲಿ ಅವರಿಗಿದ್ದ ನಿಷ್ಠೆಯನ್ನು ಎತ್ತಿ ತೋರುವಂತಿತ್ತು. ಈ ವೈರಾಗ್ಯವೇ ಅವರಿಗೆ ಮುಂದೆ ಅವಧೂತ ಶಿರೋಮಣಿ ಎಂಬ ಹೆಸರನ್ನು ತಂದು ಕೊಟ್ಟಿತು.

## ಅವಧೂತ ಚರ್ಯೆ

ವಿಷ್ಣುತೀರ್ಥರೇ ತಮ್ಮ ಗ್ರಂಥಗಳಲ್ಲಿ ತಿಳಿಸಿದಂತೆ ಬಂಧಕ ಪದಾರ್ಥಗಳಲ್ಲಿ ಪ್ರಮುಖವಾದವು ಎರಡು ಕಾಂತಾ ಹಾಗೂ ಕನಕ. ಅವೆರಡರ ಮೋಹವನ್ನು ತೊರೆದ ಜಯತೀರ್ಥಾಚಾರ್ಯರು ವೈರಾಗ್ಯ ಶಿಖರದ ತುತ್ತ ತುದಿಗೇರಿದ್ದರು. ಅವರ ದೃಷ್ಟಿಯಲ್ಲೀಗ ಮಣ್ಣು ಹಾಗೂ ಬಂಗಾರಗಳು ಒಂದೇ ಆಗಿದ್ದವು. ನನ್ನವ ಪರಕೀಯ ಎಂಬ ಭೇದ ಅಳಿಸಿಹೋಗಿತ್ತು. ಸರ್ವತ್ರ ಭಗವಂತನನ್ನು ಕಾಣುವ ಅವರಿಗೆ ಮಾಡುವುದೆಲ್ಲ ದೇವ ಪೂಜೆಯಾಯಿತು. ಓಡಾಟವೆಲ್ಲ ತೀರ್ಥ ಯಾತ್ರೆಯಾಯಿತು. ನಿರಂತರ ಸಚ್ಛಾಸ್ತ್ರಗಳ ಪಾಠ ಆಗಮಿಸಿದರು. ''ಮುಂದೆ ದೂರದಲ್ಲಿದ್ದ ತನ್ನಯ ಹಿಂದಿನ ಜನ್ಮಗತ ಶಿಷ್ಯರ ವೃಂದವನ್ನು ಉದ್ಧರಿಸಬೇಕೆಂದು ತಾನಡೆದರು ಬಂದು ಕಿನ್ನರಪುರಕೆ ಬ್ಯಾಗನೆ ಛಂದದಿಂದಲಿ ಯೋಗ್ಯರಿಗೆ ಆನಂದತೀರ್ಥರ ಶಾಸ್ತ್ರವ ಪೇಳ್ಯಾನಂದ ಪಡಿಸಿದರು.

ಕಿನ್ನರ ಪುರವೆಂಬುದು ಈಗಿನ ಕೊಪ್ಪಳದಿಂದ ಸುಮಾರು ಆರು ಮೈಲುಗಳ ದೂರದ ಕಿನ್ನಾಳ ಎಂಬ ಗ್ರಾಮ. ಅನೇಕ ಋಷಿ ಮುನಿಗಳು ತಪೋನಿರತರಾಗಿದ್ದ ಈ ಪ್ರದೇಶದಲ್ಲಿ ಹಿಂದೆ ಕಿನ್ನರಾದಿ ಸಿದ್ಧ ಪುರುಷರು ವಾಸವಾಗಿದ್ದರಿಂದ ಕಿನ್ನರಪುರವೆಂದು ಪ್ರಸಿದ್ಧವಾಯಿತಂತೆ. ಆ ಊರಿನಲ್ಲಿ ವಿಷ್ಣುತೀರ್ಥರ ಪೂರ್ವ ಜನ್ಮದ ಶಿಷ್ಯರು ವಿಶೇಷವಾಗಿ ನೆಲೆಸಿದ್ದರಿಂದ ಅವರನ್ನು ಉದ್ಧರಿಸುವುದಕ್ಕಾಗಿ ಜಯತೀರ್ಥಾಚಾರ್ಯರು ಕಿನ್ನಾಳಕ್ಕೆ ಆಗಮಿಸಿದರು. ಅಲ್ಲಿ ಸಚ್ಛಾಸ್ತ್ರಗಳ ಪಾಠ, ಪ್ರವಚನ ಮಾಡುತ್ತ ನಿರಂತರ ಭಗವಚ್ಚಿಂತನೆಯಲ್ಲಿ ಕಾಲಕಳೆದು ತೊಡಗಿದರು. ಹೂವಿರುವಲ್ಲಿ ಸಹಜವಾಗಿ ದುಂಬಿಗಳು ಸೇರುವಂತೆ ಜಯತೀರ್ಥಾಚಾರ್ಯರ ಮುಖ ಕಮಲದಿಂದ ಶಾಸ್ತ್ರಾಮೃತ ಪಾನ ಮಾಡಲು ಸಜ್ಜನ ವೃಂದವೇ ಅಲ್ಲಿ ನೆರೆಯಿತು.

''**ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವ ಮರ್ಥದಮ್**'' ಎಂದು ಭಾಗವತವು ನಿರೂಪಿಸುವಂತೆ ಅತ್ಯಂತ ದುರ್ಲಭವಾದ ಮನುಷ್ಯ ಜನ್ಮ. ಅದರಲ್ಲೂ ಸಾಧನೆಗೆ ಅತಿ ಪ್ರಶಸ್ತವಾದ ಭರತಖಂಡದಂತಹ ಪುಣ್ಯದೇಶದಲ್ಲಿ ವೈಷ್ಣವ ಜನ್ಮ ಪ್ರಾಪ್ತವಾಗಿದೆ. ಸರ್ವಜ್ಞರ ಶಾಸ್ತ್ರವನ್ನೋದಿ ಸರ್ವ ನಿಯಾಮಕ ಭಗವಂತನನ್ನು ತಿಳಿಯುವ ಸದವಕಾಶ ಪ್ರಾಪ್ತವಾಗಿದೆ. ಇಂಥ ಅಪೂರ್ವ ಅವಕಾಶವನ್ನು ಕಳೆದುಕೊಳ್ಳಬೇಡಿರಿ. ಭ್ರಾಂತಿಯನ್ನು ಬಿಡಿರಿ. ಮುಂದೆ ಅನಂತ ಜನ್ಮ ಬಂದರೂ ಇಂಥ ಜನ್ಮ ದೊರೆಯದು. ಈ ಭರತಖಂಡ ಸದೃಶ ಸಾಧನಸ್ಥಾನ. ಉಪದೇಶದಿಂದ ಬಂದ ಕಿಂಚಿತ್ ಪರತತ್ವ ಜ್ಞಾನ ಇವು ಎರಡು ಸರ್ವಥಾ ದೊರೆಯದು, ದೊರಕಿದಾಗ ಸ್ವಕಾರ್ಯ ಸಾಧಿಸಿಕೊಂಬೋದು ಬಿಟ್ಟು ನಿಮ್ಮ ಅನರ್ಥ ನೀವೇ ಮಾಡಿಕೊಂಬೋಣ ಉಚಿತವಲ್ಲ. ಪಾಮರ ಜನರ ಕೈಯಿಂದ ಮಾನ ಕಿಂಚಿದ್ಧನ, ಅವರ ಮನೆಯಲ್ಲಿ ನಾಲ್ಕು ದಿವಸ ಮೃಷ್ಟಾನ್ನ ಭೋಜನ ವಸನ ಲಾಭವೇ ದೊಡ್ಡ ಪುರುಷಾರ್ಥವೆಂದು ತಿಳಿದು ಬಾಯಿ ಒಳಗೆ ಮೂರು ಬೊಗಸೆ ಮಣ್ಣು ಹಾಕಿಕೊಂಡು ಹೋಗೋ ವ್ಯಾಪಾರ ಮಾಡುತ್ತ, ಪ್ರೇಕ್ಷಾವಚ್ಛಿಖಾಮಣಿಗಳು ನಾವೇ, ನಾವೇ ಸಕಲ ಶಾಸ್ತ್ರಾರ್ಥ ಬಲ್ಲವರು ಎಂದು ಹೇಳುತ್ತ ಅವಾಗ್ಗತಿಯಲ್ಲಿ ಬೀಳೋ ವ್ಯಾಪಾರ ಅನವರತ ಮಾಡಿ, ಜನರ ಮುಂದೆ ಕೇವಲ ಮೋಕ್ಷ ಮಾರ್ಗ ನಿರತರು ಎಂತ ತೋರಿಸಿದಾಗ್ಯೂ ನಿಮ್ಮ ಮನಸ್ಸಿಗೆ ವಂಚಕತನ ಹ್ಯಾಗೆ ತೋರೋದಿಲ್ಲ ತೋರಿ, ಪ್ರಾಜ್ಞಶಿರೋಮಣಿಗಳ ದೆಸೆಯಿಂದ ಲಜ್ಜಾ ಹ್ಯಾಗೆ ಹುಟ್ಟೋದಿಲ್ಲ. ಈ ಅಪಾರ ಸಂಸಾರ ಸಾಗರದಿಂದ ಕಡೆಗೆ ಬರಬೇಕಾದರೆ ಬಹಳ ಪ್ರತಿಬಂಧಕಗಳು ಕಲಿಯು ಯೋಗ್ಯ ಜನರಲ್ಲಿ ನಿವಿಷ್ಟನಾಗಿ, ನಿಮ್ಮ ಮಾರ್ಗಕ್ಕೆ ಪ್ರತಿಬಂಧಕನಾದಾನು. ಆ ಕಲಿಯಿಂದ ಬಂದ ದುರುಕ್ತ್ಯಾದಿಗಳು ಅವರ ಸಾಧನಾರ್ಥ, ಯಾವ ಅಧಿಷ್ಠಾನದಲ್ಲಿ ನಿಂತು ಉಪದ್ರವ ಮಾಡುತ್ತಾನೋ ಆ ಅಧಿಷ್ಠಾನರಾದ (ಯೋಗ್ಯ) ಜೀವರಿಗೆ ಜನ್ಮಾಂತರದ ಪುಣ್ಯನಾಶ ಎಂದು ತಿಳಿದು ಸ್ವನಿಂದಾ, ಸ್ವೋತ್ತಮ ನಿಂದನೆಗಳ ಗಣನೆ ಮಾಡದೆ ತಾನು ಅವರಿಗೆ ಸಮಕ್ಷದಲ್ಲಿ ಚೆನ್ನಾಗಿ ನಡಕೋಬೇಕು. ಇನ್ನೂ ಗುರು, ಮಾತೃ, ಪಿತೃ, ಭ್ರಾತೃ, ಶ್ವಶುರ, ಬಂಧು, ಮಿತ್ರ, ಪುತ್ರಾದಿಗಳಲ್ಲಿ ನಿವಿಷ್ಟನಾಗಿ ಕಲಿಯು ಬಾಧಬಡಿಸ್ಯಾನು, ತಾನು ತನ್ನ ಮನೋಗ್ರಂಥಿಯನ್ನು ಬಿಡದೆ ಇಟ್ಟು ಉಪದ್ರವಕ್ಕೆ ಶಿಲಾಸದೃಶನಾಗಿ ನಿಂತು ತನ್ನ ಉದ್ಧಾರ ಮಾಡಿಕೊಂಬವನೇ ಜಾಣ, ತನ್ನ ದೋಷ, ತನ್ನವರ ದೋಷ, ತಾನೇ ತಿಳಿದವನಂತೂ ಬಲು ಜಾಣ, ಸರ್ವಪ್ರಕಾರದಿಂದ ಶ್ರೀಹರಿ ಗುರುಭಕ್ತಿ ಪೂರ್ವಕ, ಭಗವತ್ಪಾದೀಯಾಗಮ ನಿರತರಾಗೋದು ಅದರಿಂದಲೇ ಅಶೇಷಾನಿಷ್ಟ ನಿವೃತ್ತಿ ಇಷ್ಟ ಪ್ರಾಪ್ತಿಗಳಾದಾವು ಎಂದು ಆಚಾರ್ಯರು ಯಾವಾಗಲೂ

ತಮ್ಮ ಶಿಷ್ಯರಿಗೆ ಬೋಧಿಸುತ್ತಿದ್ದರು. ಕೇವಲ ಬೋಧನೆ ಮಾಡುತ್ತಿದ್ದುದೇ ಅಲ್ಲದೇ ಅದೇ ರೀತಿಯಾದ ಜೀವನವನ್ನು ನಿರಂತರ ನಡೆಸುತ್ತ ಶಿಷ್ಯರನ್ನು ಸನ್ಮಾರ್ಗದಲ್ಲಿ ಪ್ರೇರೇಪಿಸುತ್ತಿದ್ದರು.

ಬಹುತೇಕವಾಗಿ ಅನೇಕ ಪ್ರವಚನಕಾರರ ನಡೆ-ನುಡಿಗಳಲ್ಲಿ ವ್ಯತ್ಯಾಸ ಕಂಡು ಬರುವುದು ಸಾಮಾನ್ಯವಾಗಿ ತೋರುತ್ತದೆ. ಶಾಸ್ತ್ರದಲ್ಲಿ ಸಂಪೂರ್ಣ ನಿಷ್ಠೆಯಿಲ್ಲದೇ ಶುದ್ಧವಾದ ಆಚಾರವಿಲ್ಲದೇ ಕೇವಲ ಜನಾಕರ್ಷಕವಾದ ಶೈಲಿಯಲ್ಲಿ ಪ್ರವಚನಗಳನ್ನು ನೀಡುತ್ತ, ಪಾಠಗಳನ್ನು ಕೀರ್ತಿಯ ಏಣಿಯನ್ನಾಗಿ, ಪ್ರವಚನಗಳನ್ನು ಸಂಪಾದನೆಯ ಮಾರ್ಗವನ್ನಾಗಿ ಮಾಡಿಕೊಂಡು ಜನಪ್ರಿಯತೆಯ ಗುಂಗಿನಲ್ಲಿ ಜನಗಳಿಗೆ ಹಿಡಿಸುವ ಮಾತನ್ನೇ ಆಡುತ್ತ ಅದನ್ನೇ ಶಾಸ್ತ್ರೀಯವೆಂದು ಹೇಳುತ್ತ, ಕೀರ್ತಿ ಮತ್ತು ಸಂಪತ್ತುಗಳನ್ನು ಗಳಿಸಿದರೂ ಕೂಡ ಹಾರ್ದಿಕವಲ್ಲದ ಕೇವಲ ಬೌದ್ಧಿಕವಾದ, ತುದಿನಾಲಿಗೆಯಿಂದ ಹೊರಟ ಮಾತುಗಳು ಆರಂಭದಲ್ಲಿ ಆಕರ್ಷಣೀಯವೆನ್ನಿಸಿ ಜನಗಳ ಮೇಲೆ ಪ್ರಭಾವಬೀರಿದರೂ ಸಹ, ಅವರ ಮನಸ್ಸಿನ ಮೇಲೆ ಶಾಶ್ವತವಾದ ಪರಿಣಾಮವನ್ನು ಬೀರುವುದಿಲ್ಲ ಆದರೆ ಮಾತು, ಮನಸ್ಸು ಹಾಗೂ ಕೃತಿಗಳಲ್ಲಿ ಏಕರೂಪತೆ ಹೊಂದಿರುವ ಸಜ್ಜನರ ಮಾತುಗಳು ಭವಾಟವಿಯಲ್ಲಿ ದಿಕ್ಕುತಪ್ಪಿದವರನ್ನು ದಡ ಸೇರಿಸುವ ಕೈದೀವಿಗೆಗಳಾಗುತ್ತವೆ. ಉತ್ತಮ ಜ್ಞಾನಿಗಳೂ ಪರಮ ವಿರಕ್ತರೂ, ಸದಾಚಾರ ಸಂಪನ್ನರೂ, ಆಗಿದ್ದ ಆಚಾರ್ಯರ ಮಾತುಗಳು ಕೇಳುಗರ ಮನಸ್ಸನ್ನು ಮುಟ್ಟಿ ಅಗಾಧವಾದ ಪರಿಣಾಮಬೀರಿ ಅವರನ್ನು ಸನ್ಮಾರ್ಗದಲ್ಲಿ ನಡೆಸಲು ಶಕ್ತವಾಗಿದ್ದವು. ಹೇಳಿದ ರೀತಿಯಲ್ಲಿಯೇ ಚಾಚೂತಪ್ಪದೇ ನಡೆಯುತ್ತಿದ್ದ ಆಚಾರ್ಯರು ತಮ್ಮ ಆಚರಣೆಯ ಮೂಲಕ ಒಂದು ಶ್ರೇಷ್ಠವಾದ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದರು ಗೃಹಸ್ಥಾಶ್ರಮಿಗಳಾಗಿಯೂ ಅವಧೂತರಂತೆ ಜೀವಿಸುತ್ತಿದ್ದರು. ಉತ್ತಮ ವಿದ್ವಾಂಸರೂ, ಪ್ರವಚನಕಾರರೂ ಆಗಿದ್ದುದು ಮಾತ್ರವಲ್ಲದೇ ಜಯತೀರ್ಥಾಚಾರ್ಯರು ಕಾಷ್ಠಮೌನಾದಿ ಅನೇಕ ಕಠಿಣ ತಮ ವ್ರತಗಳನ್ನು ಆಚರಿಸಿ ಇಂದ್ರಿಯಗಳನ್ನೆಲ್ಲ ಜಯಿಸಿದವರಾಗಿದ್ದರು. **''ಸುವಿರಕ್ತಿಯುಕ್ತ ದೃಢ ಭಕ್ತಿ ಮತಾಮಪಿ ಸಂಗಿಸಂಗತಿ ಬಲಾತ್ಸುದೃಢಮ್‌ನ ಭವೇದುಪಾಸನಮಿತಿ ಪ್ರಭಯನ್ನಥ ಕಾಷ್ಠಮೌನ ಮತಸೋತ್ಸ ಗುರುಃ.''**

ಒಳ್ಳೆಯ ವಿರಕ್ತಿ, ಸುದೃಢ ಭಕ್ತಿ ಇತ್ಯಾದಿಗಳನ್ನು ಹೊಂದಿದವರಿಗೂ ಕೂಡ ವಿಷಯಾಸಕ್ತರ ಸಹವಾಸದಲ್ಲಿದ್ದರೆ ವಿಶೇಷವಾದ ಭಗವಂತನ ಉಪಾಸನೆಯು ಕೈಗೂಡದು ಎಂದು ಬಗೆದ ಆಚಾರ್ಯರು ಕೇವಲ ಭಗವಚ್ಚಿಂತನೆಯಲ್ಲೇ

ತೊಡಗುವುದಕ್ಕೆ ಸಾಧನವಾದ ಅನಿತರ ಸಾಧಾರಣವಾದ ಕಾಷ್ಠಮೌನವೆಂಬ ಮಹಾವ್ರತವನ್ನು ಆಚರಿಸಿದರು ಸದಾಸದ್‌ಗ್ರಂಥ ರಚನೆಯಲ್ಲಿ, ನಿರಂತರ ಭಗವಚ್ಚಿಂತನೆಯಲ್ಲಿ ತೊಡಗಿಕೊಂಡು ಸರ್ವ ಕರ್ಮಗಳನ್ನು ಬಿಂಬನಿಗರ್ಪಿಸಿ, "**ಬಿಂಬಗರ್ಪಿಸಿ ಸಕಲ ಕರ್ಮ ಕದಂಬವನು ವಿಜಿತೇಂದ್ರಿಯನು ತಾ । ಬಿಂಬನಲ್ಲಿ ಮತ್ತೆ ಸ್ನೇಹವು ತುಂಬಿ ತುಳುಕುತಲೆ । ತುಂಬಿ ರೋಮಗಳುಬ್ಬಿ ಮೈಯಲಿ । ಸಂಭ್ರಮದಲಿ ಅಖಂಡ ಹರಿ ಪಾದಾಂಬುಜ ಬಿಡದಲವಲಂಬಿಸಿದ ಭಾಗ**" ಎಂಬಂತೆ ನಿರಂತರ ಭಗವದ್ಧ್ಯಾನದಿಂದ ಪುಳಕಿತರಾಗಿ ಜಗತ್ತಿನ ಪರಿವೆಯನ್ನು ಬಿಟ್ಟು ("**ಹ ಸತ್ಯಥೋರೋದಿತಿ ರೌತಿ ಗಾಯತಿ ಉನ್ಮಾದವನ್ನೃತ್ಯತಿ ಲೋಕ ಬಾಹ್ಯಃ**") ಎಂದು ಭಾಗವತದಲ್ಲಿ ಹೇಳಿದ ಭಾಗವತರ ಲಕ್ಷಣದಂತೆ ಆಚಾರ್ಯರು, ಕೆಲವು ಸಂದರ್ಭದಲ್ಲಿ ಭಗವಂತನ ಗುಣಗಳನ್ನು ಪಾಡುತ್ತ, ಮತ್ತೊಮ್ಮೆ ಮೈಮರೆತು ನರ್ತಿಸುತ್ತ ಮಗದೊಮ್ಮೆ ಗುಣಕೀರ್ತನೆ ಮಾಡುತ್ತಾ ಕೆಲವು ಸುಜೀವಿಗಳಿಗೆ ಉಪದೇಶ ನೀಡುತ್ತಾ ಮೂಢರನ್ನು ಕಂಡು ನಗುತ್ತ ಪುನಃ ಪುನಃ ಹರಿಯ ರೂಪಗಳನ್ನು ನೆನೆದು ನಮಸ್ಕರಿಸುತ್ತ ಕೆಲವು ಯೋಗ್ಯ ಜೀವಿಗಳನ್ನು ತಾವಾಗಿ ಕಂಡು ಉಪದೇಶ ನೀಡುತ್ತ ಸಜ್ಜನ ಸಮೂಹವನ್ನು ಉದ್ಧರಿಸಿದರು. ಯಾವುದನ್ನೂ ಬಯಸದೇ, ಯಾರನ್ನೂ ಬೇಡದೇ, ಯದೃಚ್ಛೆಯಿಂದ ದೊರೆತದ್ದನ್ನು ನಾಳೆಗಿಡದೇ, ಯಾದೃಚ್ಛಾಲಾಭ ಸಂತುಷ್ಟರಾಗಿ ಬಾಳುತ್ತಿದ್ದ ಆಚಾರ್ಯರು ಸಜ್ಜನ ವೃಂದಕ್ಕೆ ಮಹಾತ್ಮರಂತೆ ತೋರಿ ಬಂದರೆ, ಅಸೂಯಾಗ್ರಸ್ತರಾದ ಮಾತ್ಸರ್ಯಯುಕ್ತರಾದ ಗುಣ ದ್ವೇಷಿಗಳಿಗೆ ಡಾಂಭಿಕರಂತೆ ತೋರಿದರು. ಇಂಥ ಜನಗಳು ಅವರನ್ನು ನಿಂದಿಸಿದರು ಕೂಡ ಆಚಾರ್ಯರು ನಿಂದನೆಯನ್ನು ನಗುತ್ತಲೇ ಸ್ವೀಕರಿಸಿದರು. ಇದನ್ನೇ ದಾಸರು **ಕ್ಷುಲ್ಲರಾಡೋ ಅಲ್ಪ ನುಡಿಯ ಮಲ್ಲಿಸುಮ ಸಮ ಮಾಳ್ಪ ಪಾಲಿಸೆನ್ನ ವಿಷ್ಣುತೀರ್ಥನೆ** ಎಂದು ಸ್ತುತಿಸಿದ್ದಾರೆ.

## ಬದರಿಯತ್ತ ಚಿತ್ತ

ಈ ರೀತಿಯಾಗಿ ಅವಧೂತಚರ್ಯೆಯಲ್ಲಿರುತ್ತ ಭಗವಂತನನ್ನು ಮನೋಮಂದಿರದಲ್ಲಿ ಪೂಜಿಸಿ ಸಾರ್ಥಕತೆಯನ್ನು ಅನುಭವಿಸಿದರು. ಹೀಗಿರುವಾಗಿ ಜಯತೀರ್ಥಾಚಾರ್ಯರಿಗೆ ಕಲಿಯುಗದ ಹೆದ್ದೈವನಾದ ನರನಾರಾಯಣರ ಸ್ಥಲವಾದ ಬದರಿಯನ್ನು ಸಂದರ್ಶಿಸುವ ಹಂಬಲ ಉಂಟಾಯಿತು. '**ನೇದೃಶಂ ಸ್ಥಲಮಲಂ ಶಮಲಘ್ನಂ**' ಎಂಬ **ಶ್ರೀಮದಾಚಾರ್ಯರ ವಾಣಿಯೇ ಅದಕ್ಕೆ ಪ್ರೇರಣೆ ನೀಡಿತು. ಬದರಿಗ್ಹೋಗಬೇಕು ವಿಬುಧರ ವದನ ನೋಡಬೇಕು । ಸದನ ಮಾಡಬೇಕು । ಅಲ್ಲೇ**

**ಮುದದಿಂದಿರಬೇಕು** ಎಂದು ವಿಚಾರಿಸಿದ ಜಯತೀರ್ಥಾಚಾರ್ಯರು ತಮ್ಮ ಶಿಷ್ಯರೊಂದಿಗೆ ಪ್ರಯಾಣ ಬೆಳೆಸಿ ಕೃಷ್ಣಾತೀರಕ್ಕೆ ಬಂದರು. ಪಾವನತಮಳಾದ ಕೃಷ್ಣೆಯ ತಟದಲ್ಲಿ ತಮ್ಮ ದಿನಚರಿಗನುಗುಣವಾಗಿ ಪಾಠ, ಪ್ರವಚನ ಹಾಗೂ ಜಪತಪಾದಿಗಳನ್ನು ಆಚರಿಸುತ್ತ ಇರತೊಡಗಿದರು. ಹೀಗಿರಲು ಒಂದು ದಿನ ಸ್ವಪ್ನದಲ್ಲಿ ಟೀಕಾಕೃತ್ಪಾದರು ರಾಜ ವೇಷದಿಂದ ದರ್ಶನ ನೀಡಿ ಬದರಿಯಾತ್ರೆಗೆ ಹೋಗುವುದು ಬೇಡವೆಂದು ಸೂಚನೆ ನೀಡಿದರು. ಮತ್ತು ಯಾರು ಯಾವ ಕಾರ್ಯ ಸಾಧನೆಗಾಗಿ ಈ ಭರತ ಖಂಡದಂತಹ ಉತ್ತಮ ದೇಶವನ್ನೇ ಹೊಂದಿದ್ದಾರೋ ಅವರು ಅಂಥ ಮುಖ್ಯ ಪ್ರಯೋಜನವನ್ನು ಬಿಟ್ಟು ಬೇರೆ ಸಾವಿರ ಸಾವಿರ ಸಾಧನೆಗಳನ್ನು ಮಾಡಿದರೂ ಕೂಡ ಏನೂ ಮಾಡದಿದ್ದವರೇ ಸರಿ, ಪಾಪ ಭಾಜನರೇ ಸರಿ, ಈ ರೀತಿಯಾಗಿ ಶ್ರೀಮದಾಚಾರ್ಯರ ಹಾಗೂ ಟೀಕಾಕೃತ್ಪಾದರ ಸೇವೆಗಾಗಿ ದೈವೀ ಸಂಪತ್ತನ್ನು ಪಡೆದು ಅವತರಿಸಿದ ನಿಮಗೆ ಬದರಿಯಾತ್ರೆಯ ಉಚಿತವಲ್ಲ. ನೀವು ಮಾಡಬೇಕಾದ ಅತಿ ಮುಖ್ಯವಾದ ಕೆಲಸ ಬೇರೆಯೇ ಇದೆ ಎಂದು ಆಜ್ಞಾಪಿಸಿದರು. ನಿದ್ರೆಯಿಂದ ಎಚ್ಚೆತ್ತ ಆಚಾರ್ಯರ ಮನೋ ಮಂದಿರಗೊಂದಲದ ಗೂಡಾಯಿತು. ಆಚಾರ್ಯರು ಸ್ವಪ್ನವನ್ನೇ ಕುರಿತು ಚಿಂತಿಸ ತೊಡಗಿದರು.

ಇದೇನು ಆಶ್ಚರ್ಯ, ಸ್ವಪ್ನದಲ್ಲಿ ತೋರಿದ ನೃಪವೇಷಧಾರಿಯು ಯಾವುದು ಮುಖ್ಯ ಸಾಧನವೆಂದು ಹೇಳಿದ್ದಾರೋ ಅದನ್ನು ನಾನು ಯಥಾಶಕ್ತಿ ಆಚರಿಸಿದ್ದೇನೆ. ಬ್ರಾಹ್ಮಣರಿಗೆ ವಿದ್ಯೆ, ಅಧ್ಯಯನ ಅಧ್ಯಾಪನಗಳು ವಿಶೇಷವಾಗಿ ವೈಷ್ಣವರಿಗೆ ಅಧ್ಯಯನ ಮಾಡಿದ ಸಚ್ಛಾಸ್ತ್ರಗಳನ್ನು ಯೋಗ್ಯರಿಗೆ ಉಪದೇಶ ಮಾಡುವುದೇ ಅತಿ ಮುಖ್ಯ ಕರ್ತವ್ಯವೆಂದು ಹೇಳಲಾಗಿದೆ. ಇದನ್ನು ನಾನಾ ಯಥಾಮತಿ ಆಚರಿಸಿದ್ದೇನೆ. ಅನೇಕ ಜನ್ಮಗಳಲ್ಲಿ ಪುಣ್ಯ ಸಂಪಾದನೆ ಮಾಡಿದವರಿಗೂ ದೊರಕದು ಎಂದು ಬದರಿಯನ್ನು ವರ್ಣಿಸಲಾಗಿದೆ ಇಂಥ ಬದರಿ ಯಾತ್ರೆಗೆ ಯಾವ ಕಾರಣದಿಂದ ನಿಷೇಧಿಸುತ್ತಿದ್ದಾರೆ ಎಂದು ಯೋಚಿಸತೊಡಗಿದರು ಹೀಗೆ ಯೋಚಿಸಿ ನಿದ್ರಿಸಿದ ಆಚಾರ್ಯರ ಸ್ವಪ್ನದಲ್ಲಿ ಮತ್ತೆ 'ದಿವ್ಯ ಭವ್ಯ ಯತಿ ವೇಷ ವಿಶೇಷರಾಗಿ' ದರ್ಶನ ನೀಡಿದ ಟೀಕಾಕೃತ್ಪಾದರು ಯತಿ ವೇಷದಿಂದ ಸ್ಪಷ್ಟೀಕರಿಸಿದರು.

ಸಜ್ಜನರ ಉದ್ಧಾರಕ್ಕಾಗಿಯೇ ಅವತರಿಸಿದ ತಮ್ಮಂತವರು ತೀರ್ಥ ಯಾತ್ರೆಗಳಂಥ ಕಾರ್ಯಗಳಲ್ಲಿ ವಿಶೇಷವಾಗಿ ತೊಡಗದೇ, ಕಲಿಯ ಪ್ರಾಬಲ್ಯದಿಂದ ಮನಸ್ಸಿನ ಶುದ್ಧಿಯನ್ನು ಕಳೆದುಕೊಂಡ ಸುಜನರ ಬುದ್ಧಿ ಶುದ್ಧಿಗಾಗಿ ನಿರಂತರ ನಮ್ಮಿಂದ

ರಚಿತವಾದ ಟೀಕಾ ಗ್ರಂಥಗಳ ಪ್ರವಚನಾದಿಗಳನ್ನು ಮಾಡಬೇಕು. ಇದೇ ನಮ್ಮ ಆಜ್ಞೆ ಇದೆ ನಿಮ್ಮಿಂದ ನಡೆಯಬೇಕಾದ ಮುಖ್ಯ ಕಾರ್ಯ ಎಂದು ಆಜ್ಞಾಪಿಸಿದರು.

ಎಚ್ಚೆತ್ತ ನಂತರ ಆಚಾರ್ಯರಿಗೆ ಮತ್ತೂ ಆಶ್ಚರ್ಯವಾಯಿತು. ಈಗಾಗಲೇ ಅನೇಕ ಜ್ಞಾನಿವರೇಣ್ಯರು ತಮ್ಮ ಗ್ರಂಥ ರಚನೆ ಪಾಠ ಪ್ರವಚನಗಳ ಮೂಲಕ ಶಿಷ್ಯ ಪರಂಪರೆಯನ್ನು ನಿರ್ಮಾಣ ಮಾಡಿ ಇದನ್ನು ನೆರವೇರಿಸಿದ್ದಾರೆ. ಮತ್ತೆ ನಾನು ಮಾಡಬೇಕಾದದು ಏನಿದೆ ಎಂದು ಚಿಂತಿಸಿದರು. ಮಾರನೆಯ ದಿನ ಮತ್ತೆ ಪೂರ್ವದಂತೆ ಬ್ರಾಹ್ಮೀ ಮುಹೂರ್ತದಲ್ಲಿ ಯತಿಯ ವೇಷದಿಂದ ದರ್ಶನ ನೀಡಿದ ಟೀಕಾರ್ಯರು ನನ್ನಿಂದ ರಚಿತವಾದ ಶ್ರೀಮನ್ನ್ಯಾಯ ಸುಧೆಯು ಭಾವುಕ ಭಕ್ತರಿಗೆ ಅಮೃತದೌತಣದಂತಿದೆ. ಆದರೆ ಕೇವಲ ತರ್ಕಕರ್ಕಶವಾದ ಕೋಟಿ ಕ್ರಮಗಳಲ್ಲಿ ಮುಳುಗಿದ ಜನರು ಸುಧೆಯ ನಿಜವಾದ ಅಂತರಾರ್ಥವನ್ನು ಅರಿಯುವಲ್ಲಿ ಹಾಗೂ ಅರಹುವಲ್ಲಿ ಸಮರ್ಥರಾಗುವುದಿಲ್ಲ. ನಮ್ಮಿಂದ ಅಧ್ಯಯನ ಮಾಡಿದ ನಿಮ್ಮಿಂದ ಸುಧಾಂತರ್ಯವು ತೋರಬೇಕಾಗಿದೆ ನೀವು ಈ ಕೆಲಸವನ್ನು ಮಾಡಬೇಕೆಂಬುದೇ ನನ್ನ ಆಜ್ಞೆಯಾಗಿದೆ ಎಂದು ಆಜ್ಞಾಪಿಸಿದರು.

ಜಯಾಚಾರ್ಯರ ಮಾತು ನಿಜವೆಂದು ಒಪ್ಪಿದ ಆಚಾರ್ಯರು ಮತ್ತೆ ಚಿಂತಿಸತೊಡಗಿದರು. ಈ ಕಾರ್ಯವು ಅವಶ್ಯಕವಾದರೂ ಕೂಡ ನನಗೆ ಅಶಕ್ಯವೆಂದು ತೋರುತ್ತದೆ. ಎಲ್ಲ ಶಾಸ್ತ್ರಗಳನ್ನು ಅಧ್ಯಯನ ಮಾಡಿದ, ತಮ್ಮ ಪಾಂಡಿತ್ಯವನ್ನೇ ಎಲ್ಲೆಡೆ ಪ್ರದರ್ಶಿಸಿ ಪ್ರಶಸ್ತಿಗಳನ್ನು ಪಡೆದವರಿಂದಲೂ, ಅನೇಕ ಜನ ಶಿಷ್ಯರನ್ನು ಹೊಂದಿದವರಿಂದಲೂ ಸಾಧ್ಯವಾಗದ ಈ ಮಹತ್ಕಾರ್ಯವು ನನ್ನಿಂದ ಸಾಧ್ಯವೇ ಎಂದು ಚಿಂತಿಸುತ್ತಿರಲು ಮತ್ತೆ ಶೇಷವಾಗಿ ದರ್ಶನ ನೀಡಿದ ಜಯಾರ್ಯರು ಇಂಥ ಮಹತ್ಕಾರ್ಯದಲ್ಲಿ ಕೇವಲ ಶಾಸ್ತ್ರ ವಿಮರ್ಶನವೊಂದೇ ಸಾಲದು ಅದಕ್ಕಿಂತ ಹೆಚ್ಚಾಗಿ ಮಹದನುಗ್ರಹ ಪಡೆದಿರಬೇಕು. ಗುರುಗಳ ಪೂರ್ಣಾನುಗ್ರಹ ಪಡೆದವನಿಗೆ ಮತಿ ಮಾಂದ್ಯವಿದ್ದರೂ ಕೂಡ ಎಲ್ಲವನ್ನು ಸಾಧಿಸಬಲ್ಲ, ನಿಮಗೆ ನನ್ನ ವಿಶೇಷ ಅನುಗ್ರಹವಿದೆ. ಚಿಂತಿಸದೇ ಕಾರ್ಯ ಪ್ರವೃತ್ತರಾಗಿರಿ ಎಂದು ಆಜ್ಞಾಪಿಸಿದರು. ಸ್ವಪ್ನದಲ್ಲಿಯೇ ಆಚಾರ್ಯರಿಗೆ ಬದರೀ ಕ್ಷೇತ್ರದ ದರ್ಶನವಾಯಿತು. ಒಂದೆಡೆ ನರನಾರಾಯಣರು ಅವರ ಸನ್ನಿಧಾನದಲ್ಲಿ ವೇದವ್ಯಾಸ ದೇವರ ಹತ್ತಿರ ಕುಳಿತು ಅಧ್ಯಯನ ನಡೆಸಿದ ಆಚಾರ್ಯ ಮಧ್ವರು ಲೋಕ ಪಾವನಿಯಾದ ಜಾಹ್ನವಿ ಅವಳ ಮಡಿಲಲ್ಲಿ ತಪೋನಿರತ ಮುನಿಗಳ ಸಮೂಹದಿಂದ ಕೂಡಿದ ಬದರಿಕಾಶ್ರಮವನ್ನು ಸಂದರ್ಶಿಸಿದರು. ಜಯಾರ್ಯರು ಆಜ್ಞಾಪಿಸಿದರು. ನೀನು ನೋಡಿದ ಗಂಗೆ ಋಷಿಗಳು

ದೇವತೆಗಳು ಹಾಗೂ ಬದರಿನಾರಾಯಣ ಸಾಕ್ಷಾತ್ತಾಗಿ ನೀನಿದ್ದೆಡೆಗೆ ಬರುತ್ತಾರೆ. ನೀನಿದ್ದ ಜಾಗವೇ ದಕ್ಷಿಣ ಬದರಿ ಎಂದು ಪ್ರಸಿದ್ಧವಾಗುತ್ತದೆ. ಆದ ಕಾರಣ ಬದರಿಯಾತ್ರೆಯ ಇಚ್ಛೆಯನ್ನು ತೊರೆದು ನಮ್ಮ ಗ್ರಂಥಗಳ ವ್ಯಾಖ್ಯಾನದಲ್ಲೇ ತೊಡಗುವುದು ಶ್ರೇಯಸ್ಸಾಧನವಾದುದು.

ಟೀಕಾಚಾರ್ಯರ ಇಚ್ಛೆಯನ್ನು ಅರಿತು ಆಚಾರ್ಯರು ಬದರಿಯಾತ್ರೆಯನ್ನು ಬದಿಗಿರಿಸಿ ಮಧ್ಯದೇಶದೆಡೆಗೆ ಪಯಣ ಬೆಳೆಸಿದರು. ಕೃಷ್ಣಾ ತೀರದಿಂದ ಧಾರವಾಡ ಪ್ರಾಂತದ ಕಡೆಗೆ ಪಯಣ ಬೆಳೆಸಿದರು. ಸುಮಾರು ಈ ಅವಧಿಯಲ್ಲೇ ಆಚಾರ್ಯರ ಪುತ್ರರಾದ ಕೃಷ್ಣಾಚಾರ್ಯರ ವಿದ್ಯೆ , ವಿನಯ, ಸದಾಚಾರ ಮೊದಲಾದ ಗುಣಗಳಿಗೆ ಮಾರುಹೋದ ಸದ್ಗ್ರಹಸ್ಥರೊಬ್ಬರು ತಮ್ಮ ಮಗಳನ್ನು ಕೊಟ್ಟು ವೈಭವದಿಂದ ಕನ್ಯಾದಾನ ಮಾಡಿ ಕೃತಾರ್ಥರಾದರು. ಕೃಷ್ಣಾಚಾರ್ಯರು ತಂದೆಯ ಆಜ್ಞೆಯಂತೆ ಪತ್ನಿಯನ್ನು ಸತ್ಯಭಾಮೆ ಎಂಬ ಹೆಸರಿನಿಂದ ಕರೆದರು. ತಮ್ಮ ಪತ್ನಿ , ಮಗ, ಸೊಸೆ ಹಾಗೂ ಶಿಷ್ಯ ಪರಿವಾರದಿಂದ ಕೂಡಿದ ಆಚಾರ್ಯರು ಸಂಚಾರ ಮಾಡುತ್ತ ಮಧ್ಯದೇಶದಲ್ಲಿದ್ದ ಶೂರ್ಪವೆಂಬ ಗ್ರಾಮಕ್ಕೆ ನಡೆದರು.

## ''ಮೊರಬದಲ್ಲಿ ಆಚಾರ್ಯರು''

ಮೊರಬದಲ್ಲಿ ಶೇಷಾಚಾರ್ಯ ಎಂಬ ಉತ್ತಮ ಸದಾಚಾರ ಸಂಪನ್ನರಾದ ಬ್ರಾಹ್ಮಣರಿದ್ದರು. ನಿತ್ಯದಲ್ಲಿ ಪ್ರತಿಮೆಗಳಲ್ಲಿ ಭಗವಂತನನ್ನು ಪೂಜಿಸಿ ಲಕ್ಷ ಪುಷ್ಪಗಳು ಕೋಟಿ ತುಳಸಿ ಅರ್ಚನೆ ಇತ್ಯಾದಿಗಳನ್ನು ಮಾಡಿ ಭಗವಂತನನ್ನು ಪೂಜಿಸಿ, ಚೇತನ ಪ್ರತಿಮೆಗಳಲ್ಲಿಯೂ ಭಗವಂತನನ್ನು ಚಿಂತಿಸುತ್ತಿದ್ದ ಅವರಿಗೆ ಸ್ವರೂಪೋದ್ಧಾರಕ ಗುರುವಿನ ಪ್ರಾಪ್ತಿಯ ಚಿಂತೆ ಆವರಿಸಿತ್ತು . ''ಜ್ಞಾನವಿಲ್ಲದೆ ಮೋಕ್ಷವಿಲ್ಲ, ಗುರುವಿಲ್ಲದೇ ಜ್ಞಾನವಿಲ್ಲ'' ಅಂಥ ಜ್ಞಾನೋಪದೇಶಕ ಗುರುವಿನ ಪ್ರಾಪ್ತಿ ಹೇಗಾದೀತು ಎಂದು ಚಿಂತಿಸುತ್ತ ಅವರು ಗುರು ನೂತನ ಪುರವೆಂದು ಹೆಸರಾದ ಗುರ್ಲಹೊಸುರಿಗೆ ಬಂದು ಪ್ರಾಣದೇವರ ಸೇವೆಯಲ್ಲಿ ರತರಾದರು. (ಈ ಗುರ್ಲಹೊಸೂರು ಗ್ರಾಮವು ಮಲಪ್ರಭಾ ನದಿ ತೀರದಲ್ಲಿತ್ತು , ಈಗ ಮಲಪ್ರಭಾದ ಅಣೆಕಟ್ಟಿನಲ್ಲಿ ಮುಳುಗಡೆಯಾಗಿದೆ. ಹೊಸ ಊರನ್ನು ನಿರ್ಮಾಣ ಮಾಡಿ ಅಲ್ಲಿಯೇ ಪ್ರಾಣದೇವರನ್ನು ಪ್ರತಿಷ್ಠಾಪನೆ ಮಾಡಲಾಗಿದೆ.) ಶೇಷಾಚಾರ್ಯರ ಭಕ್ತಿಯುತ ಸೇವೆಯಿಂದ ಪ್ರೀತನಾದ ಭಾರತೀ ಪತಿಯು ಸ್ವಪ್ನದಲ್ಲಿ ಸೂಚನೆ ನೀಡಿದ, ನೀನು ಹುಡುಕುತ್ತಿರುವ ನಿನ್ನ ಗುರುಗಳು ಇಲ್ಲಿಗೇ ಬರುತ್ತಾರೆ. ಶೀಘ್ರದಲ್ಲಿಯೇ ನಿನ್ನ ಗುರುಗಳ ಪ್ರಾಪ್ತಿ ನಿನಗಾಗಲಿದೆ ಎಂದು ಆಜ್ಞಾಪಿಸಿದ

ದೇವನ ಅನುಗ್ರಹದಿಂದ ಉತ್ಕಂಠಿತರಾದ ಶೇಷಾಚಾರ್ಯರು ಅಲ್ಲಿಯೇ ಇದ್ದು ಗುರುಗಳ ನಿರೀಕ್ಷೆಯಲ್ಲಿ ತೊಡಗಿದ್ದರು.

ಇದೇ ಸಮಯದಲ್ಲಿ ಈಶನಾಜ್ಞೆಯಂತೆ, ಗುರುಗಳ ಪ್ರೇರಣೆಯಂತೆ ಶೇಷಾಚಾರ್ಯರನ್ನು ನಿಮಿತ್ತ ಮಾಡಿಕೊಂಡು ಎಲ್ಲ ಸಜ್ಜನ ಸಮುದಾಯವನ್ನು ಉದ್ಧರಿಸಬೇಕೆಂದು ಕಾರುಣ್ಯದಿಂದ ಜಯತೀರ್ಥಾಚಾರ್ಯರು ಗುರ್ಲಹೊಸೂರಿನ ಭಾರತೀಶನ ಸನ್ನಿಧಿಗೆ ಬಂದರು. ಜಯತೀರ್ಥಾಚಾರ್ಯರನ್ನು ಕಂಡ ಶೇಷಾಚಾರ್ಯರಿಗೆ ಪರಮಾನಂದವಾಯಿತು. ಇವರೇ ನನ್ನ ಉದ್ಧಾರಕ ಗುರುಗಳು ಎಂದು ಅಂತರಂಗ ನುಡಿಯಿತು. ಇವರಿಂದಲೇ ನನ್ನ ಉದ್ಧಾರವೆಂಬ ನಿಶ್ಚಯವಾಯಿತು. ಆನಂದ ತುಂದಿಲರಾದ ಶೇಷಾಚಾರ್ಯರು ಬಳಿಗೆ ಬಂದವರೇ ಭಕ್ತಿಪರವಶರಾಗಿ ದಿಂಡುರುಳಿದ ಬಾಳೆಯ ಮರದಂತೆ ಪಾದಗಳಿಗೆರಗಿದರು. ಉದ್ಧರಿಸಬೇಕೆಂದು ಪರಿಪರಿಯಾಗಿ ಪ್ರಾರ್ಥಿಸಿಕೊಂಡರು. ಅವರ ವಿನಯ, ವಿದ್ಯಾದಾಹ, ಗುರುಭಕ್ತಿ, ಸದಾಚಾರಗಳಿಂದ ಪ್ರೀತರಾದ ಆಚಾರ್ಯರು ಅವರೊಡನೆ ಅವರ ಗ್ರಾಮವಾದ ಶೂರ್ಪ(ಮೊರಬ)ಕ್ಕೆ ಆಗಮಿಸಿದರು.

(ಶೂರ್ಪ ಗ್ರಾಮವನ್ನು ಕೃಷ್ಣಾತೀರದ ನೃಸಿಂಹ ಕ್ಷೇತ್ರವಾದ ಶೂರ್ಪಾಲಿ ಎಂದು ತಪ್ಪಾಗಿ ತಿಳಿದು ಅನೇಕರು ಹೀಗೆಯೇ ಬರೆದಿದ್ದಾರೆ. ಶ್ರೀ ಗುರು ಗೋವಿಂದ ವಿಠ್ಠಲದಾಸರ ಹರಿಭಕ್ತ ವಿಜಯ 5ನೇ ಭಾಗದ 38ನೇ ಪುಟ ಹಾಗೂ ಜಯಸಿಂಹ(ತಿರುಮಲೇಶ ಹರಿ ವಿಠ್ಠಲ)ರ ವಿಷ್ಣುತೀರ್ಥ ದರ್ಶನ ಪುಟ 57ರಲ್ಲಿ ಶೂರ್ಪ ಗ್ರಾಮವನ್ನು ಶೂರ್ಪಾಲಿ ಎಂದೇ ಹೆಸರಿಸಲಾಗಿದೆ. ವಾಸ್ತವವಾಗಿ ಶೂರ್ಪಾಲಿ ಜಮಖಂಡಿಯ ಹತ್ತಿರ ಕೃಷ್ಣಾ ತೀರದಲ್ಲಿದೆ. ಶೂರ್ಪವು (ಮೊರಬ) ಈಗಿನ ನವಲಗುಂದ ತಾಲೂಕು ಧಾರವಾಡ ಜಿಲ್ಲೆಯ ಒಂದು ಗ್ರಾಮವಾಗಿದೆ. ಅಲ್ಲದೇ ಇದು ಗುರ್ಲಹೊಸೂರಿಗೂ ಹತ್ತಿರದ ಊರಾಗಿದ್ದು ಪ್ರಯಾಣದ ಯಾವ ಸೌಕರ್ಯಗಳೂ ಇಲ್ಲದ ಆ ಕಾಲದಲ್ಲಿ ಶೇಷಾಚಾರ್ಯರು ಮತ್ತೆ ಮತ್ತೆ ಗುರ್ಲಹೊಸೂರಿಗೆ ಹೋಗಿ ಸೇವೆ ಮಾಡಿ ಅಲ್ಲಿ ಗುರುಗಳ ಸಂದರ್ಶನ ಪಡೆದದ್ದು ಯುಕ್ತವೆನಿಸುತ್ತದೆ).

## ಶೂರ್ಪ ಮೊರಬದಲ್ಲಿ ಆಚಾರ್ಯರು

ಮೊರಬದ ಶೇಷಾಚಾರ್ಯರ ಪ್ರಾರ್ಥನೆಯಂತೆ ಮೊರಬದಲ್ಲಿ ಬಂದು ನೆಲೆಸಿದ ಜಯತೀರ್ಥಾಚಾರ್ಯರನ್ನು ಹುಡುಕಿಕೊಂಡು ಅನೇಕ ಶಿಷ್ಯರು ಬಂದರು.

ಆಚಾರ್ಯರ ವಿಮಲ ಕೀರ್ತಿಯಿಂದ ಆಕರ್ಷಿತರಾದ ಅನೇಕ ಸಜ್ಜನರು ಇವರನ್ನು ಜ್ಞಾನಾರ್ಜನೆಗಾಗಿ ಆಶ್ರಯಿಸಿದರು. ಶೇಷಾಚಾರ್ಯರ ನಿಮಿತ್ತದಿಂದ ಸಜ್ಜನವೃಂದವೇ ಸುಧಾರಸ ಪಾನಮೂಡಿ ನಲಿದಾಡಿತು. ದಿನ ದಿನಕ್ಕೆ ಆಚಾರ್ಯರ ಕೀರ್ತಿ ದಶ ದಿಕ್ಕುಗಳಲ್ಲಿ ಹರಡಿತು, ಅಂತೆಯೇ ಅವರ ಶಿಷ್ಯ ಪರಿವಾರವೂ ಬೆಳೆಯತೊಡಗಿತು.

## ಉಪದೇಶಾಮೃತ

ಶಿಷ್ಯರಿಗೆ ಗ್ರಂಥಗಳ ಪಾಠವನ್ನು ಹೇಳುವುದರ ಮೂಲಕ ಅವರನ್ನು ಉದ್ದಾಮ ಪಂಡಿತರನ್ನಾಗಿಸಿದ ಜಯತೀರ್ಥಾಚಾರ್ಯರು ಅವರಿಗೆ ಹೃದಯಂಗಮವಾಗಿ ಉಪದೇಶ ನೀಡಿ ಅವರನ್ನು ಉತ್ತಮ ಸಾಧಕರನ್ನಾಗಿಯೂ ಉನ್ನತ ಮಟ್ಟದ ಉಪಾಸಕರನ್ನಾಗಿಯೂ ನಿರಂತರ ಭಗವಚ್ಚಿಂತನರತರನ್ನಾಗಿಯೂ ಮಾಡುತ್ತಿದ್ದ ಆಚಾರ್ಯರು ನೀಡುತ್ತಿದ್ದ ಉಪದೇಶ ವಾಣಿ, ಬರಡು ಬಾಳಿನಲ್ಲಿ ಅಧ್ಯಾತ್ಮದ ರಸ ಕಾರಂಜಿಯನ್ನೇ ಪುಟಿಸಿ ಬದುಕನ್ನು ತತ್ವ ಸಮೃದ್ಧವಾಗಿ ಕಂಗೊಳಿಸುವಂತೆ ಮಾಡಲು ಗಂಗಾಧಾರೆಯಂತಿತ್ತು .

ಕಲಿಕಾಲ ಬಹಳ ಭಯಂಕರವಾಗಿದೆ. ಸಾಧನೆಗೆ ವಿಘ್ನಗಳೇ ಬಹಳ. ಸಾಧಕರ ಮನಸ್ಸನ್ನು ಕೆಡಿಸಲು ಕಲಿಯು ಹೊಂಚು ಹಾಕಿ ಕುಳಿತಿದ್ದಾನೆ. ಹರಿವಾಯುಗಳಲ್ಲಿ ಭಕ್ತಿ ಕಡಿಮೆಯಾದಷ್ಟು ಕಲಿಯ ಪ್ರಭಾವ ಜಾಸ್ತಿಯಾಗುತ್ತದೆ. ಕಲಿಗೆ ಎಲ್ಲ ಕಡೆಗೂ ಮುಕ್ತ ಪ್ರವೇಶವಿದೆ. ''**ಉಪಭೋಗ ಸಾಧನ ವೃಂದದಲಿ ಧನವಸನ ಸುಂದರ । ಮಂದಿರಾ ಭರಣಾದಿಯಲಿ । ಯುವತಿಯರ ರೂಪದಲಿ । ಛಂದದಿಂದ ಪೊಕ್ಕು ತಾವೊಂದು ಬಗೆಯಲಿ ಮೋಹಿಸುತ ಬಹು । ಮಂದಿ ಆದವರನ್ನು ವಂಚಿಸಿ ಕೆಡಿಸಿ ಬಿಡುವನು ।** ಕಲಿಯ ಈ ವಂಚನೆಯಿಂದ ತಪ್ಪಿಸಿಕೊಂಡು ಅವನ ವಶನಾಗದಿದ್ದರೆ, ಅವರ ತಂದೆ, ತಾಯಿ, ಗುರುಗಳೇ ಮೊದಲಾದ ಹಿತೈಷಿಗಳಲ್ಲೋ ಹೊಕ್ಕು ತನ್ನ ದಾಳ ಹಾಕಿ ಮಾರ್ಗ ತಪ್ಪಿಸಿ ಬಿಡುತ್ತಾನೆ''. ದುಷ್ಟನಾದ ಕಲಿ ನಿಮ್ಮ ಮಾರ್ಗವನು ಕಟ್ಟಿ ವಿರೋಧವ ಮಾಡುವನು, **ಶಿಷ್ಟರ ಒಳಗೆ ನಿರ್ವಿಷ್ಟವಾಗಿ ಬಹುದುಷ್ಟ ಮಾತುಗಳನ್ನು ನುಡಿಸುವನು. ಮತ್ತಿನ್ನು ಗುರುಮಾತಾ ಪಿತೃಶ್ವಶುರರಲ್ಲಿ ಯತ್ನವುಳ್ಳವನು ಆಗಿ । ಪುತ್ರ ಮಿತ್ರಾದಿಗಳಲ್ಲಿದ್ದು ದಣಿಸುವ ಅತ್ಯಂತ ಆಪ್ತನಾಗಿ,** ಆದುದರಿಂದ ವಿವೇಕಿಯಾದವನು ಚೆನ್ನಾಗಿ ವಿಚಾರ ಮಾಡಿ ಕಲಿಯನ್ನು ದೂರವಿಡಬೇಕು. ಸದಾವಿಭುಧರ ಸಹವಾಸದಲ್ಲಿಯೇ ಆಸಕ್ತನಾಗಿರಬೇಕು. ಸತತ ಸತ್ಕರ್ಮಾನುಷ್ಠಾನದಿಂದ ನಿರಂತರ ಸಚ್ಛಾಸ್ತ್ರದ ಅಧ್ಯಯನದಿಂದ ಹರಿವಾಯುಗಳನ್ನು ಸೇವಿಸಿ ತೃಪ್ತಿ ಪಡಿಸಬೇಕು. ಆಗಲೇ

ನಿರ್ಮಲವಾದ ಜ್ಞಾನ ಪುಟ್ಟಿ ಮೋಕ್ಷ ದೊರಕುವುದು. ಈ ಘೋರನಾದ ಕಲಿಯನ್ನು ದೂರ ಅಟ್ಟಲು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಸರ್ವ ಮೂಲಗ್ರಂಥಗಳ ಹಾಗೂ ಜಯಾರ್ಯ ಟೀಕಾಗ್ರಂಥಗಳ ನಿರಂತರ ಅಧ್ಯಯನವೇ ಪ್ರಮುಖವಾದ ಅಸ್ತ್ರ. ನಿರಂತರ ಶಾಸ್ತ್ರಾಧ್ಯಯನದಿಂದ ಭಗವಂತನ ಕೃಪಾಪಾತ್ರನಾಗಿ ಹರಿಯ ಪಾದದ ಧೂಳಿಯ ಕಣದಿಂದ ತನ್ನ ಪಾಪವನ್ನು ತೊಳೆದು ಕೊಂಡ ಭಾಗವತೋತ್ತಮರನ್ನು ಕಲಿ ಕೂಡ ನಮಿಸಿ ಪಕ್ಕಕ್ಕೆ ಸರಿದು ನಿಲ್ಲುತ್ತಾನೆ. ಅಂಥವರ ಎದುರು ಕಲಿಯ ಆಟ ಸಾಗದು. (''**ಯತಏತ ಇಹೈವ ವಸಂತಿ ಸುಖಂ ಸುಖತೀರ್ಥ ಸುತೀರ್ಥ ಸುವೃದ್ಧಿಪರಾಃ । ನಹಿಕಾಲ ಬಲಂ ಹರಿಪಾದ ರಜೋಧೂತ ಪಾಪಗಣೇಷು ಜನೇಷು ಸದಾ ।**'') ಎಂದು ಅವರೇ ತಮ್ಮ ಭಾಗವತಧರ್ಮ ಸ್ತೋತ್ರದಲ್ಲಿ ಹೇಳಿದಂತೆ ಕಲಿಯ ಉಪದ್ರವವನ್ನು ಅದರಿಂದ ಸಜ್ಜನವೃಂದಕ್ಕೆ ಆಗುವ ಹಾನಿಯನ್ನೂ ಹಾಗೂ ಕಲಿಯ ಬಲೆಯಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ತಿಳಿಸುತ್ತಿದ್ದರು.

ಸನ್ನಿಹಿತ ಶಿಷ್ಯರಿಗೆ ಉಪದೇಶ ನೀಡುತ್ತಿದ್ದ ಆಚಾರ್ಯರು ಉಪದೇಶದ ಸಮಯದಲ್ಲಿ ಪ್ರತ್ಯಕ್ಷವಾಗಿ ಇಲ್ಲದ ಶಿಷ್ಯರಿಗೂ ಪತ್ರ ಮುಖೇನ ಜ್ಞಾನೋಪದೇಶ ಮಾಡುತ್ತಿದ್ದರು ಹೀಗೆ ಅವರು ಶಿಷ್ಯರಿಗೆ ಬರೆದ ಪತ್ರವೊಂದು ಉಪದೇಶ ಪತ್ರವೆಂದೇ ಪ್ರಸಿದ್ಧವಾಗಿದೆ. ಸಾಧಕನು ದಿನವೊಂದರ ಗಳಿಗೆಗಳನ್ನು ಹೇಗೆ ಕಳೆಯಬೇಕು ಎಂಬುದನ್ನಲ್ಲದೆ. ಕಲಿಯ ಬಾಧೆಯಿಂದ ನಿವೃತ್ತರಾಗಲು ನಿರಂತರ ಶ್ರೀಮದಾಚಾರ್ಯರ ಶಾಸ್ತ್ರಾಧ್ಯಯನದಲ್ಲಿ ನಿರತರಾಗಬೇಕೆಂಬ ಸಂದೇಶವನ್ನೇ ನೀಡಿ ಆಚಾರ್ಯ ಶಾಸ್ತ್ರದಲ್ಲಿರುವ ತಮ್ಮ ನಿಷ್ಠೆಯನ್ನು ಶಿಷ್ಯರ ಮೇಲಿರುವ ತಮ್ಮ ವಾತ್ಸಲ್ಯವನ್ನು ಶಿಷ್ಯರ ಉದ್ಧಾರದ ಬಗೆಗಿನ ತಮ್ಮ ಕಳಕಳಿಯನ್ನು ತೋರಿದ್ದಾರೆ. ಸಕಲ ಸಜ್ಜನರನ್ನು ಉದ್ದೇಶಿಸಿ ಬರೆದಂತಿರುವ ಇದು ಪರಿಶಿಷ್ಟದಲ್ಲಿ ಮುದ್ರಿಸಲ್ಪಟ್ಟಿದೆ.

ಆಚಾರ್ಯರ ಉಪದೇಶವನ್ನು ಆಲಿಸಿದ ಶಿಷ್ಯರಿಗೆ ಕಲಿಪುರುಷನ ವರ್ಣನೆಯನ್ನು ಕೇಳಿ ಕಲಿಯನ್ನು ನೋಡುವ ಬಯಕೆಯುಂಟಾಯಿತು.

''**ಎಂಥವರಿಗೂ ಬಾಧಿಸುವ ಕಲಿ ಅವ ಎಂಥವನಿರುವನು ನೋಡೆವು ನಾವು**'' **ಅಂತಃಕರಣದಿ ತೋರಿಸುವುದು ಅವನಂತವೆಲ್ಲ ಬಲ್ಲಿರಿ ನೀವು** ಎಂದು ಕಲಿಯನ್ನು ತೋರಿಸುವಂತೆ ಅವರೆಲ್ಲ ಗುರುಗಳನ್ನು ಪ್ರಾರ್ಥಿಸಿದರು. ಶಿಷ್ಯರ ಮನದಿಂಗಿತವನ್ನ ಅರಿತ ಆಚಾರ್ಯರು ''ಇವತ್ತಿಗೆ ಸರಿಯಾಗಿ ಐದನೇ ದಿವಸ ನಾಲ್ಕನೇ ಪ್ರಹರದಲ್ಲಿ ಇದೇ ಬೀದಿಯಲ್ಲಿ ಕಲಿ ಬರುತ್ತಾನೆ. ಅವನ ಗುರುತನ್ನು ಕೇಳಿರಿ ಚಂಡಾಲನಾಗಿರುವ

ಆತ ಕಪ್ಪು ವಸ್ತ್ರಗಳನ್ನು ಧರಿಸಿ, ಎರಡು ನಾಯಿಗಳನ್ನು ಕೈಯಲ್ಲಿ ಹಿಡಿದುಕೊಂಡು ಇದೇ ಬೀದಿಯಲ್ಲಿ ಹೋಗುತ್ತಾನೆ. ಅವನೇ ಕಲಿ ಪುರುಷ''. ಅವನನ್ನ ಯಥೇಚ್ಛವಾಗಿ ನೋಡಿರಿ ಎಂದು ಹೇಳಿದರು.

ಕುತೂಹಲಿಗಳಾದ ಶಿಷ್ಯರು ಕಲಿಯನ್ನು ನೋಡಲು ಕಾತರದಿಂದ ಕಾಯತೊಡಗಿದರು. ಸರಿಯಾಗಿ ಐದನೆಯ ದಿನ ನಾಲ್ಕನೆಯ ಪ್ರಹರದಲ್ಲಿ ಎರಡು ನಾಯಿಗಳೊಂದಿಗೆ ಕಪ್ಪು ಬಣ್ಣದ ಬಟ್ಟೆಯನ್ನು ಧರಿಸಿದ ಕಡು ಕಪ್ಪು ಬಣ್ಣದ ಅತೀ ದುರ್ಲಕ್ಷಣಗಳಿಂದ ಕೂಡಿದ ವ್ಯಕ್ತಿಯೊಬ್ಬ ಹಾಯ್ದು ಹೋದನು. ಗುರುಗಳು ಹೇಳಿದ ಕಲಿ ಪುರುಷ ಇವನೇ ಎಂದು ಶಿಷ್ಯರಿಗೆ ಮನದಟ್ಟಾಯಿತು.

**ಈತನೇ ನೋಡಿರಿ ಗುರುನಾಥ ಪೇಳಿದಕಲಿ**
**ಈತಬರುವಾತಾ । ಪ್ರಖ್ಯಾತಾ ಅದ್ಭುತಾ ।**
**ಪರಮಾದುರ್ಲಕ್ಷಣಾ ಬರುವನು ಎದುರೀಗೆ ।**
**ಎರಡೂನಾಯಿಗಳಿಂದ ಕೂಡೀ । ತ್ವರಮಾಡೀ ಬಲು ಖೋಡೀ ಕಿಡಿಗೇಡಿ ।**
**ಅಂತರಂಗದೊಳಗಿರುವಾಗ । ಅನಂತಾದ್ರೀಶನ ಮರೆಸೀ ।**
**ಎಂಥಾವರಿಗೂ ಹಾಕುವ ಜಾಲಾ । ದುಃಶೀಲಾಕರಿಗಾಲ ಚಂಡಾಲಾ ।**

ಎಂದು ಪರಸ್ಪರ ಹೇಳಿಕೊಳ್ಳುತ್ತಾ ಕಲಿಪುರುಷನನ್ನು ದಿಟ್ಟಿಸಿ ನೋಡಿದರು. ತಮ್ಮ ಗುರುಗಳು ಭೂತ, ಭವಿಷ್ಯತ್, ವರ್ತಮಾನಗಳನ್ನು ಬಲ್ಲ ತ್ರಿಕಾಲ ಜ್ಞಾನಿಗಳೆಂದು ಗುರುಗಳಲ್ಲಿ ವಿಶೇಷ ಭಕ್ತಿ ಜಾಗ್ರತವಾಯಿತು. ಇಂಥ ಗುರುಗಳನ್ನು ಪಡೆದ ನಾವೇ ಧನ್ಯರು ಎಂದು ಹೆಮ್ಮೆಯಿಂದ ಹೇಳಿಕೊಂಡು ವಿಶೇಷವಾಗಿ ಗುರುಗಳಲ್ಲಿ ಶ್ರದ್ಧೆ ಮಾಡತೊಡಗಿದರು.

## ಸಂದರ್ಶನ ನೀಡಿದ ಶಂಕರ

ಮೊರಬದ ಶೇಷಾಚಾರ್ಯರ ಭಾಗ್ಯವೇ ಭಾಗ್ಯ , ಅವರ ಗ್ರಾಮದಲ್ಲಿಯೇ ವಿರಕ್ತ ಶಿಖಾಮಣಿಗಳಾದ ಜಯತೀರ್ಥಾಚಾರ್ಯರು ಅನೇಕ ದಿವಸಗಳವರೆಗೆ ವಾಸ ಮಾಡಿದರು. ಆ ಸ್ಥಳದಲ್ಲಿ ಪ್ರತಿನಿತ್ಯವೂ ಅನೇಕ ಶಿಷ್ಯರಿಗೆ ಸುಧಾದಿ ಸಚ್ಛಾಸ್ತ್ರಗಳ ಪಾಠಗಳು ನಡೆದವು. ಸಕಲ ದುರಿತ ನಿವಾರಕನಾದ ಸಕಲ ಇಷ್ಟ ಪ್ರದರಾದ ಶ್ರೀ ಲಕ್ಷ್ಮೀನರಸಿಂಹ ದೇವರನ್ನು ಜಯತೀರ್ಥಾಚಾರ್ಯರು ಮೊರಬದಲ್ಲಿ ಪ್ರತಿಷ್ಠಾಪನೆ ಮಾಡಿದ್ದಾರೆ. ಅತಿ ಸುಂದರವಾದ ಮಂದಹಾಸ, ಮೃದು

ಸುಂದರಾಂಗನಾದ ನರಸಿಂಹ ಭಾವಚಿತ್ರವನ್ನು ಕೊಡಲಾಗಿದೆ. ಇದೇ ಗ್ರಾಮದಲ್ಲಿಯೇ ಸಿದ್ಧ ಪುರುಷರಾದ ಆಚಾರ್ಯರ ಅನೇಕ ಮಹಿಮೆಗಳು ಭಗವದಿಚ್ಛೆಯಂತೆ ಪ್ರಕಟಗೊಂಡವು. ಆಚಾರ್ಯರು ಸಾಮಾನ್ಯರಲ್ಲ ನರರಾಗಿ ಅವತರಿಸಿ ಬಂದ ಸುರರೇ ಸರಿ ಎಂದು ಮನದಟ್ಟಗೊಳಿಸುವ ಅನೇಕ ಅತಿ ಮಾನುಷ ಘಟನೆಗಳು ಒಡೆದು ಹೋದವು. ಒಮ್ಮೆ ಹೀಗಾಯಿತು. ಅದೊಂದು ಪತ್ರದಲ್ಲಿ ತಿಳಿಸಿದಂತೆ ವಿಧಾನ ಪೂರ್ವಕವಾಗಿ ಸ್ನಾನ ಮಾಡಿ ಬಿಂಬ ಧ್ಯಾನರತರಾದರು. ಸೂರ್ಯೋದಯದ ತನಕ ಧ್ಯಾನಮಾಡಿ, ಶಿಷ್ಯರು ಬಂದ ನಂತರ ಪಾಠ ಆರಂಭವಾಯಿತು. ''ಬಿಂಬನ ನೋಡ್ಮನಕಾ । ಸೂರ್ಯನ ಬಿಂಬೋದಯ ತನಕಾ । ಸಂಭ್ರಮ ಪಡುವನು, ನಂಬಿ ಶಿಷ್ಯ ಕದಂಬ ಬರುವತನಕಾ ॥

ಸೂರ್ಯೋದಯಕ್ಕೆ ಆರಂಭವಾದ ಪಾಠವು ಮಧ್ಯಾಹ್ನದ ತನಕ ನಡೆಯಿತು. ಪಾಠವನ್ನು ಮುಗಿಸಿದ ಆಚಾರ್ಯರು ಎಲ್ಲರಿಗೂ ಹೊರಡಲು ಆಜ್ಞೆ ನೀಡಿದರು. ತಮ್ಮ ಶಿಷ್ಯರಲ್ಲಿ ಅತಿ ಪ್ರಿಯರಾದ ಸುಗುಣರು ಮುಖ್ಯಾನುಗರು ಉಳಿದ ಸ್ವಾನುಗರೊಳತಿ ಪ್ರಿಯರು ಎಂಬಂತೆ ಅಜನ ಅತಿ ಪ್ರಿಯ ಶಿಷ್ಯರನ್ನು ಬಳಿಗೆ ಕರೆದರು. ಗುರುಗಳ ಇಂಗಿತವನ್ನು ಅರಿತ ಶಿಷ್ಯರು ಅಲ್ಲಿಯೇ ಒಳಗೆ ಕುಳಿತರು. ಗಟ್ಟಿಯಾಗಿ ಬಾಗಿಲು ಹಾಕಿಕೊಂಡು ಅತಿ ರಹಸ್ಯ ಆಧ್ಯಾತ್ಮ ತತ್ವಗಳನ್ನು ಶಿಷ್ಯರಿಗೆ ತಿಳಿಸುತ್ತಿದ್ದಾರೆ. ಜಯತೀರ್ಥಾಚಾರ್ಯರು, ಆಗೊಂದು ವಿಚಿತ್ರ ನಡೆಯಿತು. ಒಳಗೆ ಬಾಗಿಲು ಹಾಕಿಕೊಂಡು ಕುಳಿತಿದ್ದಾರೆ ಜಯಾರ್ಯರು ಆ ಸಂದರ್ಭದಲ್ಲಿ ಇದ್ದಕ್ಕಿದ್ದಂತೆ ಬೈರಾಗಿಯೊರ್ವ ವಂದಿಸುತ್ತ ಒಳಗೆ ಬಂದ,

**ಭೋಜಯ ತೀರ್ಥಾಚಾರ್ಯ । ನಿಜ ಜನ ಪೂಜಿತ ನಿಜಚರ್ಯಾ ।**
**ಶ್ರೀ ಜಗದೀಶನ ಪೂಜಾಸಕ್ತ ಸರೋಜಗಳಿಗೆ ಸೂರ್ಯಾ ।**
**ಭೂಸುರ ಜನಪ್ರಿಯಾ । ಹಸಿದು ಬಂದೇನೋ ನಾನು ।**
**ನೀಡಯ್ಯ ನೀನು । ಹಸಿವಿಯಕ್ಕಿಂತಲಿ ತೃಷೆಯ ಏನ್ಹೇಳಲಿ**
**ಬಿಸಿಲು ಕಾಯ್ದು ಬಹುನೊಂದೆ । ಈಗಿಂದೆ ದೂರಿಂದೆ ।**
**ಬಹಳಾತುರದಿಂದೆ । ಪಶುಪತಿ ತಾನು ಈ ಹಸಿವಿಯ ತಾಳದೆ**
**ವಿಷವ ಕುಡಿದನೆಂದು ತಿಳಿದೆ । ನಿನ್ನಲ್ಲಿ ಇದ್ದದ್ದು ಚೆನ್ನಾಗಿ ನೀಡಲು**
**ಚೆನ್ನಿಗನಂತಾದ್ರೀಶ ನೋಡಾ ।**

ಎಂದು ಮಾತಿನಲ್ಲಿ ತಾನು ವಿಷಪಾನ ಮಾಡಿದ ನಂಜುಂಡೇಶ್ವರನೆಂದು ಸೂಚನೆ ನೀಡುತ್ತಾ ಭಿಕ್ಷೆ ಬೇಡುತ್ತಿದ್ದಾನೆ. ಬೈರಾಗಿಯ ಧ್ವನಿ ಕೇಳಿದ ಜಯತೀರ್ಥಾಚಾರ್ಯರು ತಾವೇ ಎದ್ದು ಅತ್ತಿತ್ತ ಹುಡುಕಿ ಅಲ್ಲಿದ್ದ ಅರಳು ಹಿಟ್ಟನ್ನು ಕಂಡು ಅದನ್ನೇ ತೆಗೆದುಕೊಂಡು ಬಂದು ಬೈರಾಗಿಯ ಅರಿವೆಯಲ್ಲಿ ಸುರುವಿದರು. ನಂತರ ತಾನೇ ಅರಿವೆಯನ್ನು ಗಂಟು ಕಟ್ಟಿ ಆತನ ಕೈಯಲ್ಲಿ ನೀಡಿದರು. ಗುರುಗಳ ಚರ್ಯೆಯನ್ನು ವೀಕ್ಷಿಸಿದ ಶಿಷ್ಯರಿಗೆ ಕುತೂಹಲ ಆಶ್ಚರ್ಯ ಭರಿತರಾದ ಶಿಷ್ಯರು ಕೇಳಿದರು. ಗುರುಗಳೇ ಈ ವ್ಯಕ್ತಿ ಅಬ್ರಾಹ್ಮಣನೂ, ಅಸ್ನಾತನೂ, ಭಸ್ಮಧಾರಿಯೂ, ಅವೈಷ್ಣವನೂ ಆಗಿದ್ದಾನೆ, ನೀನು ಬ್ರಾಹ್ಮಣೋತ್ತಮರೂ ಪರಮವೈಷ್ಣವರೂ, ಅತ್ಯಂತ ಸದಾಚಾರಿಗಳೂ ಆಗಿದ್ದೀರಿ. ತಾವು ಯಾರನ್ನು ಸ್ಪರ್ಶ ಮಾಡುವುದಿಲ್ಲ, ಹೀಗಿರಲು ಈ ವ್ಯಕ್ತಿಯನ್ನು ಸ್ಪರ್ಶ ಮಾಡಲು ಕಾರಣವೇನು, ಇವನಾರು ? ಮುಚ್ಚಿದ ಬಾಗಿಲಿನಿಂದ ಈತ ಹೇಗೆ ಒಳಬಂದ ಎಲ್ಲವೂ ಆಶ್ಚರ್ಯಕರವಾಗಿದೆ ಎಂದರು. ಶಿಷ್ಯರ ಕುತೂಹಲವನ್ನು ಕಂಡು ಜಯತೀರ್ಥಾಚಾರ್ಯರು ಮುಗುಳು ನಗುತ್ತಾ ಆ ಭಿಕ್ಷುಕನು ಹೊದ್ದ ಹೊದಿಕೆಯನ್ನು ಪೂರ್ಣವಾಗಿ ಎಳೆದು ಹಾಕಿದರು. ಏನಾಶ್ಚರ್ಯ, ಭಿಕ್ಷುಕರಾಗಿ ಬಂದಿದ್ದವರು ವೈಷ್ಣವಾಗ್ರೇಸರ ರುದ್ರದೇವರಾಗಿ ಕಂಗೊಳಿಸಿದರು. ಶಿಷ್ಯರು ಆಶ್ಚರ್ಯದಿಂದ ನೋಡುತ್ತಿದ್ದಂತೆಯೇ ಪಾರ್ವತಿ, ಗಣಪತಿ, ಸ್ಕಂದ, ನಂದಿ ಮುಂತಾದ ಪರಿವಾರದವರು ದರ್ಶನ ನೀಡಿದರು. ಸಪರಿವಾರ ದರುಶನ ನೀಡಿದ ರುದ್ರದೇವರು ಅಭಯ ಹಸ್ತದಿಂದ ಆಶೀರ್ವಾದ ನೀಡಿ, ಆಕಾಶ ಮಾರ್ಗವಾಗಿ ಕೈಲಾಸಕ್ಕೆ ನಡೆದರು. ಶಿಷ್ಯರಿಗೆಲ್ಲ ಮಹದಾನಂದ.

**ಕಾಮಿಸಿದವರಿಗೆ ಶೀಘ್ರದಿ ಕಾಮಿತ ಫಲದಾತಾ ।**
**ನೇಮದಿ ಸರ್ವರ ಚಿತ್ತನಿಯಾಮಕನಾದಾತಾ ।**
**ಶ್ರೀಮದನಂತಾದ್ರೀಶನ ಪ್ರೇಮಾಸ್ಪದನಾದಾತಾ ।**
**ಶ್ರೀಮಹಾದೇವನೆ ಸರಿ ಕೈಲಾಸದಲಿರುವಂಥಾತಾ ।**

ಎಂದು ಭಾವಿಸಿದರು. ಶ್ರೀ ಕಂಠನ ದರುಶನದಿಂದ ಆನಂದಿತರಾಗಿ ಕಂಠತುಂಬಿ ಗುರುಗಳನ್ನು ಸ್ತೋತ್ರ ಮಾಡಿದರು. ನಿಮ್ಮ ಅನುಗ್ರಹದಿಂದಲೇ ನಮಗೆಲ್ಲ ಕೈಲಾಸಾಧಿ ಪತಿಯ ದರುಶನವಾಯಿತು. ನಿಮ್ಮ ಅನುಗ್ರಹ ನಿರಂತರ ನಮ್ಮ ಮೇಲಿರಲಿ ಎಂದು ಪ್ರಾರ್ಥಿಸಿದರು. ಆಚಾರ್ಯರು ಮಾತ್ರ ಚತುರ್ದಶ ಭುವನಾಧಿಪತಿಯ ದರುಶನವೂ ಆಗುತ್ತದೆ ಎಂದು ನಿರ್ವಿಕಾರರಾಗಿ ನುಡಿದರು.

# ಭಾರತೀಶನ ದರುಶನ

ಚತುರ್ದಶ ಭುವನಾಧಿಪತಿಯ ದರುಶನವೂ ಆಗುತ್ತದೆ ಎಂಬ ಗುರುಗಳ ಮಾತನ್ನು ಕೇಳಿದ ಶಿಷ್ಯರು ಭಾರತೀಶನ ದರುಶನಕ್ಕೆ ಕಾತರರಾಗಿದ್ದರು, ಯಾವಾಗ ದೊರಕುವುದೊ ಆ ಭಾಗ್ಯ ಎಂದು ಬಯಸುತ್ತ ಗುರು ಕರುಣೆಯನ್ನು ನೆನೆದು ಸಂತಸ ಪಡುತ್ತಿದ್ದರು. ಅದೊಂದು ದಿವಸ ಪ್ರವಚನದ ಕಾಲದಲ್ಲಿ ಒಬ್ಬ ಸುಂದರನಾದ ಬ್ರಹ್ಮಚಾರಿಯು ಬಂದು ತನ್ನ ಜೊತೆ ಬರುವಂತೆ ಆಚಾರ್ಯರನ್ನು ಕರೆದ. ತಕ್ಷಣದಲ್ಲಿ ಜಯತೀರ್ಥಾಚಾರ್ಯರು ಎದ್ದು ಬ್ರಹ್ಮಚಾರಿಯ ಜೊತೆ ನಡೆದರು. ಗುರುಗಳ ಮಾತನ್ನು ನೆನೆಸಿಕೊಂಡ ಶಿಷ್ಯರುಗಳು ಭಾರತೀಪತಿಯ ದರುಶನವಾಗುವದೆಂದು ತಿಳಿದು ಗುರುಗಳನ್ನು ಹಿಂಬಾಲಿಸಿದರು. ಬ್ರಹ್ಮಚಾರಿಯೇ ಮುಖ್ಯ ಪ್ರಾಣನೆಂದು ಅರಿಯದ ಶಿಷ್ಯರುಗಳು ಕುತೂಹಲದಿಂದ ನುಡಿದರು. ನಾವೆಲ್ಲಿಗೆ ಹೊರಟಿದ್ದೇವೆ. ನಮ್ಮನ್ನು ಕರೆದೊಯ್ಯುತ್ತಿರುವ ಈ ಬ್ರಹ್ಮಚಾರಿ ಯಾರು ? ವಾಯುದೇವರ ಸಮ ವೇಗವುಳ್ಳವನಾಗಿದ್ದಾನೆ. ವಾಯು ದೇವರೇನು ? ಮನೋ ವೇಗದಿಂದ ಹೋಗುತ್ತಾನೆ. ಮನೋಭಿಮಾನಿ ರುದ್ರದೇವರೇನು ? ನಾವು ಕೂಡ ಎಂದಿಲ್ಲದ ವೇಗದಿಂದ ಇವರನ್ನು ಹಿಂಬಾಲಿಸುತ್ತಿದ್ದೇವೆ. ನಡೆಯುತ್ತಿರುವ ಆಯಾಸವು ನಮಗೆ ಸ್ವಲ್ಪವಾದರೂ ತೋರುತ್ತಿಲ್ಲ, ಇವನ ಚರ್ಯೆಯೇ ಕೌತುಕವಾಗಿದೆ ನಾವೆಲ್ಲ ಇವನಿಂದ ವ್ಯಾಮೋಹಿತರಾಗಿದ್ದೇವೆ. ಇವನಾರು ಎಂದು ಚಿಂತಿಸುತ್ತಿರುವಾಗಲೇ ಅವರೆಲ್ಲ ಗುರು ನೂತನಪುರ(ಗುರ್ಲಹೊಸೂರು)ಕ್ಕೆ ಬಂದಿದ್ದರು. ಜಯತೀರ್ಥಾಚಾರ್ಯರನ್ನು ಕರೆದುಕೊಂಡು ಬ್ರಹ್ಮಾಚಾರ್ಯರು ಪ್ರಾಣದೇವರ ಗರ್ಭಗುಡಿಯಲ್ಲಿ ಪ್ರವೇಶ ಮಾಡಿದ, ಹಿಂಬಾಲಿಸಿ ಬಂದ ಶಿಷ್ಯರು ದೇವಾಲಯದಲ್ಲಿ ಬರುವ ವೇಳೆಗೆ ಅಲ್ಲಿ ಆಚಾರ್ಯರೊಬ್ಬರೆ ನಿಂತಿದ್ದರು. ಎತ್ತ ಹುಡುಕಿದರೂ ಬ್ರಹ್ಮಚಾರಿಯ ಸುಳಿವಿಲ್ಲ. ಗರ್ಭಗುಡಿಯಿಂದ ಯಾರೂ ಹೊರಬಂದಿಲ್ಲ. ಹಿಂಬಾಲಿಸಿದ ಶಿಷ್ಯರೆಲ್ಲ ಬ್ರಹ್ಮಚಾರಿಯೇ ಪ್ರಾಣನಾಥನೆಂದು ತಿಳಿದುಕೊಂಡರು. ಸಾಕ್ಷಾತ್ತಾಗಿ ಮುಖ್ಯ ಪ್ರಾಣನೇ ದರುಶನ ನೀಡಿದರೂ ಕೂಡ ಗುರುತಿಸದೇ ಹೋದೆವಲ್ಲ ಎಂದು ಮನದಿ ನೊಂದುಕೊಂಡರು. ಗುರು ಅನುಗ್ರಹದಿಂದ ದರುಶನವಾಯಿತು. ಅವರ ಕೃಪೆ ಇದ್ದರೆ ಇನ್ನೂ ವಿಶೇಷ ಅನುಗ್ರಹವಾದೀತು ಎಂದು ತಿಳಿದು ಗುರುಗಳ ಮಹಿಮೆಯನ್ನು ಕೊಂಡಾಡಿದರು. ಆಚಾರ್ಯರು ಮತ್ತೆ ಮೂರು ದಿವಸಗಳವರೆಗೆ ಅಲ್ಲಿಯೇ ಇದ್ದು ಪ್ರಾಣ ಪತಿಯ ಸೇವೆ ಸಲ್ಲಿಸಿ ಶಿಷ್ಯರ ಜೊತೆಗೆ ಮೊರಬಕ್ಕೆ ನಡೆದರು.

## ದೀಪ ಹಚ್ಚಲು ವಂಶ ಬೆಳಗಿತು

ಇನ್ನೊಂದು ದಿವಸ ಸಾಯಂಕಾಲ ಸೂರ್ಯಾಸ್ತದ ಸಮಯದಲ್ಲಿ ಆಚಾರ್ಯರು ''ಸಾಯಂ ಸಂಧ್ಯಾ ಬಹಿರ್ಜಲೇ'' ಎಂಬಂತೆ ಸಂಧ್ಯಾವಂದನೆಗಾಗಿ ಜಲಾಶಯಕ್ಕೆ ಹೊರಟಿದ್ದರು. ಕೆಲವು ಶಿಷ್ಯರಿದ್ದರು ಜೊತೆಗೆ, ಅಂಗಳಕ್ಕೆ ಬರುವಷ್ಟರಲ್ಲಿ ಸೊಸೆಯಾದ ಸತ್ಯಭಾಮೆಯನ್ನು ಕಂಡರು. ಮದುವೆಯಾಗಿ ಪತಿಗ್ರಹಕ್ಕೆ ಬಂದು ಮೂರು ವರುಷಗಳಾಗಿದ್ದರೂ ಸಂತಾನವಾಗಿರಲಿಲ್ಲ. ಜಯತೀರ್ಥಾಚಾರ್ಯರಂತಹವರಿಗೆ ಸೊಸೆಯಾಗಿ, ಕೃಷ್ಣಾರ್ಯರಂತಹ ಉತ್ತಮ ಗ್ರಂಥಕಾರರಾದ ವಿದ್ವಾಂಸರ ಕೈಹಿಡಿದು ಜನ್ಮ ಸಾರ್ಥಕವಾದರೂ ಸಂತಾನವಿಲ್ಲದ ಕೊರತೆ ಅವಳನ್ನು ಬಾಧಿಸುತ್ತಿತ್ತು. ಸಾಧ್ವಿಯಾದ ಆ ಪತಿವ್ರತೆ ಮನದ ಕೊರಗನ್ನು ತೋರದೆ ಶ್ರದ್ಧೆಯಿಂದ ಪತಿಯ, ಅತ್ತೆ ಮಾವಂದಿರ ಸೇವೆಯಲ್ಲಿ ನಿರತಳಾಗಿದ್ದಳು. ಇದೀಗ ಅವಳ ಸೇವೆ ಫಲಿಸಿತ್ತು. ಆಚಾರ್ಯರು ಸೊಸೆಯನ್ನು ಕರೆದು ಅನುಗ್ರಹಿಸಿದರು. ಸತ್ಯಭಾಮೆ ಇಂದಿನಿಂದ ನಲ್ವತ್ತು ದಿನಗಳವರೆಗೆ ನಮ್ಮ ಪ್ರವಚನ ಶಾಲೆಯಲ್ಲಿ ಸಾಯಂಕಾಲ ಪ್ರವಚನದ ಸಮಯಕ್ಕೆ ದೀಪಹಚ್ಚು. ಅದರಿಂದಲೇ ನಿನಗೆ ಸತ್ಪುತ್ರರಾಗುವುದು ''**ಏಸತ್ಯಭಾಮೆ ಈ ಹೊತ್ತು ಮೊದಲು ನಾಲ್ವತ್ತು ದಿನ ಸಂಜೆಯಲ್ಲಿ । ನಿತ್ಯದಿ ದೀವಿಗೆ ಹಚ್ಚು, ಪ್ರವಚನದುತ್ತಮಶಾಲಿಯಲಿ । ಮತ್ತು ಈ ಕಾರ್ಯಕ್ಕೆ ಬ್ಯಾಸತ್ತು ನೀ ಬಿಡಬ್ಯಾಡ ಉತ್ತಮನಾಗಿಹುದು । ಮಿಥ್ಯವೆಂದೆನ ಬೇಡ ಸತ್ಯ ಹೇಳುವೆನು ಪುತ್ರನ ನಿನಗೆ ಕೊಡೋದು ।** ಎಂದು ಆದೇಶ ನೀಡಿದರು. ಆಚಾರ್ಯರ ಮಾತನ್ನು ಶಿರಸಾವಹಿಸಿದ ಸತ್ಯಭಾಮಾದೇವಿಯು ಅಂದಿನಿಂದ ನಾಲ್ವತ್ತು ದಿನಗಳವರೆಗೆ ಭಕ್ತಿಯಿಂದ ಪ್ರವಚನ ಸಮಯದಲ್ಲಿ ದೀಪ ಹಚ್ಚಿದಳು. ಮುಂದೆ ಹತ್ತು ತಿಂಗಳಲ್ಲಿ ಪುತ್ರನನ್ನು ಪಡೆದಳು. ಮಗನಿಗೆ ಟೀಕಾಚಾರ್ಯ ಎಂದು ನಾಮಕರಣ ಮಾಡಿದರು. ಮತ್ತೊಬ್ಬ ಮೊಮ್ಮಕ್ಕಳು ಆಚಾರ್ಯರು ಸನ್ಯಾಸ ಸ್ವೀಕಾರ ಮಾಡಿದ ನಂತರ ಜನಿಸಿರಬೇಕು ಅವರಿಗೆ ವಿಷ್ಣುತೀರ್ಥಾಚಾರ್ಯರು ಎಂದು ನಾಮಕರಣ ಮಾಡಿದರು. ಹಿರಿಯರಾದ ಟೀಕಾಚಾರ್ಯರಿಂದ ಮಾದಿನೂರಿನಲ್ಲಿರುವ ಅಡವಿ ಮನೆತನ ಹಾಗೂ ವಿಷ್ಣು ತೀರ್ಥಾಚಾರ್ಯರಿಂದ ಕೂಸನೂರಿನ ಅಡವೀ ಮನೆತನವೂ (ಪರ್ಯಾಯಸ್ಥರ ಮನೆತನ) ಬೆಳೆದು ಬಂದವು.

# ತುಳಸಿಗೆ ಜಲ ಗರ್ಭದಿ ಫಲ

ಜಯತೀರ್ಥಾಚಾರ್ಯರು ತಮ್ಮ ಸೊಸೆಯಾದ ಸತ್ಯಭಾಮಾ ದೇವಿಗೆ ಸಂತಾನ ಫಲವನ್ನು ಇತ್ತರೆಂದು ಜನಜನಿತವಾಯಿತು. ಅದೇ ಊರಲ್ಲಿ ದೇವ ಬ್ರಾಹ್ಮಣ ಪೂಜಕನಾಗಿದ್ದ ಸುಂಕದ ಅಧಿಕಾರಿಯೊಬ್ಬನಿದ್ದ. ಆತನಿಗೂ ವಿವಾಹವಾಗಿ ಬಹು ಕಾಲದವರೆಗೂ ಸಂತಾನವಾಗಿರಲಿಲ್ಲ. ಆಚಾರ್ಯರ ಸೊಸೆ ಸತ್ಯಭಾಮಾ ದೇವಿಯ ಮುಖಾಂತರ ಆಚಾರ್ಯರ ಮಹಿಮೆಯನ್ನು ತಿಳಿದ ಆಕೆ ಆಚಾರ್ಯರನ್ನು ಶರಣು ಹೋದಳು. ''**ಪ್ರಾತಃ ಸ್ನಾನವ ಮಾಡಿ, ಪೀತಾಂಬರವನ್ನುಟ್ಟು । ಧೌತ ಕಂಚುಕವ ತೊಟ್ಟು । ಪ್ರೀತಿಲೆ ನೊಸಲೊಳ್ಳ ಜಾತಿ ಕುಂಕುಮವಿಟ್ಟು । ಮಾತನಾಡುವುದು ಬಿಟ್ಟು । ಪ್ರವಚನ ಮಂದಿರಕ್ಕೆ ಬಂದು, ಆಚಾರ್ಯರ ದಿವ್ಯನಾಮವನ್ನು ಮಂತ್ರದಂತೆ ಜಪಿಸುತ್ತ, ಪ್ರಣಾಮಗಳನ್ನು ಸಲ್ಲಿಸುತ್ತಿದ್ದಳು. ಹೀಗಿರಲು ಒಂದು ದಿನ ಆಚಾರ್ಯರ ಅನುಗ್ರಹ ಅವಳ ಮೇಲಾಯಿತು. ಅವಳ ಮನೋಗತವನ್ನು ಅರಿತ ಆಚಾರ್ಯರು ''ತುಳಸಿಯ ವೃಕ್ಷಗಳು ನದಿಯ ತೀರದಲ್ಲಿರುಹವು ಭಾಳು । ಜಲವು ಇಲ್ಲದಲೆ ಬಿಸಿಲು ದಿನದಲೀಗ ಬಳಲುತಿಹವು । ನೀನು ಜಲವ ಸೇಚನವ ಮಾಡು । ಜಲವ ಸೇಚನ ಮಾಡಲು । ಶ್ರೀ ತುಳಸಿ ಫಲಿಸುತಾಯಿರಲು ತುಳಸಿಯೊಳಿರುವಂಥ ಚೆಲುವಾನಂತಾದ್ರೀಶ ಚೆಲುವ ಮಗನ ಕೊಟ್ಟು ಸಲಹುವ ನಿನ್ನನು**'' ಎಂದು ಗ್ರಾಮದ ಹೊರಗೆ ಜಲಾಶಯದ ತೀರದಲ್ಲಿದ್ದ ತುಳಸಿ ಗಿಡಗಳಿಗೆ ಗ್ರೀಷ್ಮ ಋತುವಿನಲ್ಲಿ ನೀರೆರೆಯಲು ಸೂಚಿಸಿದರು. ಅದರಂತೆಯೇ ಮಾಡಿದ ಆಕೆ ಅನತಿ ಸಮಯದಲ್ಲಿಯೇ ಮುದ್ದಾದ ಗಂಡು ಮಗುವಿನ ತಾಯಿಯಾದಳು.

ಈ ಪ್ರಸಂಗಗಳು ಆಚಾರ್ಯರ ತಪಸ್ಸಿದ್ಧಿಯನ್ನು, ವಾಕ್ಸಿದ್ಧಿಯನ್ನು ತೋರಿಸುವುದರ ಜೊತೆಗೆ ಆಚಾರ್ಯರ ಕಾರುಣ್ಯಕ್ಕೂ ದ್ಯೋತಕವಾಗಿವೆ. ಜಲಸೇಚನದಂಥ ಸಣ್ಣ ಕಾರ್ಯವೂ ಮಹತ್ಫಲಕ್ಕೆ ಕಾರಣವಾಗುವುದರ ಹಿಂದೆ ಆಚಾರ್ಯರು, ಪಡೆದ ಭಗವಂತನ ಅನುಗ್ರಹ ಎದ್ದು ತೋರುತ್ತದೆ. ಜ್ಞಾನಿಗಳ ಗುರುಗಳ ಆದೇಶದಂತೆ ಮಾಡಿದ ಸಣ್ಣ ಕಾರ್ಯವೂ ಮಹಾಫಲವನ್ನು ನೀಡುತ್ತದೆ ಎಂಬುದಕ್ಕೆ ಇದು ನಿದರ್ಶನವಾಗಿದೆ. ತನ್ನನ್ನು ಸರ್ವಾತ್ಮನಾ ನಂಬಿದ ತಪಸ್ವಿಗಳ ಮಾತನ್ನು ಸತ್ಯ ಮಾಡಲು ಭಗವಂತ ಕಟಿಬದ್ಧನಾಗಿರುತ್ತಾನೆ ಎಂಬ ಶಾಸ್ತ್ರಗಳ ಮಾತಿಗೂ ಇದು ದೃಷ್ಟಾಂತವಾಗಿದೆ.

# ಅಕಾಲದ ಹಣ್ಣು ವಂಶದ ಕಣ್ಣು

ಆಚಾರ್ಯರ ಪ್ರಿಯ ಶಿಷ್ಯರಾದ ಮೊರಬದ ಶೇಷಾಚಾರ್ಯರ ಪುತ್ರ ರಾಮಾಚಾರ್ಯರಿಗೂ ಸಂತಾನವಿರಲಿಲ್ಲ. ಅವರಿಗೆ ಅನೇಕ ಮಕ್ಕಳು ಜನಿಸಿದರೂ ಕೂಡ ಜನ್ಮಹೊಂದಿದ ಕೂಡಲೇ ಮರಣ ಹೊಂದುತ್ತಿದ್ದವು. ಇದರಿಂದ ಬಹಳ ಮನನೊಂದ ಅವರ ಪತ್ನಿಯು

**''ಹಿರಿಯರು ನೀವೀಗಿರುವರು ಕೇಳಿರಿ ಸೆರಗೊಡ್ಡಿ ಬೇಡುವೆ ।**
**ನಿಮಗೆ, ಪರಮ ಸಮರ್ಥರು ಗುರುಗಳಿರಲು ಈ ಪರಿದುಃಖಾ ಕೇಳಿರಿ ನಮಗೆ ॥**
**ಹುಟ್ಟಿದ ಮಕ್ಕಳು ನಷ್ಟವಾಗಲು ಎಷ್ಟು ಕಷ್ಟ ಪಡುವೆನು ನಾನು ಘಟ್ಟಿ ಅವರ ಪಾದ ಮುಟ್ಟಿ ಭಜಿಸಲೊಂದಿಷ್ಟು ಕರುಣೆ ಬಾರದೆ ಏನು ॥**

ಎಂದು ಆಚಾರ್ಯರನ್ನು ಪ್ರಾರ್ಥಿಸುವಂತೆ ಮಾವನವರಲ್ಲಿ ಬೇಡಿಕೊಂಡಳು. ಆಚಾರ್ಯರಲ್ಲಿ ಭಾರೀ ವಿಶ್ವಾಸ ಹೊಂದಿದ್ದ ಅವರು ಆಚಾರ್ಯರಲ್ಲಿ ಪ್ರಾರ್ಥಿಸಿಕೊಂಡರು. ಆದರೆ ಆಚಾರ್ಯರು ತಕ್ಷಣ ಏನನ್ನೂ ಹೇಳದೇ ಸುಮ್ಮನಿದ್ದು ಬಿಟ್ಟರು. ಮುಂದೆ ಒಂದು ದಿನ ಮೊರಬ ಗ್ರಾಮದಿಂದ ನರೇಂದ್ರ ಗ್ರಾಮಕ್ಕೆ ಹೋಗಿದ್ದ ಆಚಾರ್ಯರು ಅಲ್ಲಿನ ತೋಟದ ವೃಕ್ಷವೊಂದರಲ್ಲಿ ಅಕಾಲದಲ್ಲಿ ಬಿಟ್ಟಿದ್ದ ವಿಶೇಷ ಫಲವೊಂದನ್ನು ಕಂಡರು. ಅದನ್ನು ಸ್ವತಃ ತಾವೇ ವೃಕ್ಷದಿಂದ ಕಿತ್ತು ತಂದು ರಾಮಾಚಾರ್ಯರಿಗೆ ನೀಡಿದರು ಮತ್ತು ಹೇಳಿದರು ''ಹೇ ರಾಮಾಚಾರ್ಯನೇ ಇಲ್ಲಿಯವರೆಗೆ ನಿಮಗೆ ಜ್ಞಾನ ಸುತನನ್ನು ಮಾತ್ರ ನೀಡಿದ್ದೇವೆ, ಇದೀಗ ಔರಸ ಪುತ್ರನನ್ನು ನೀಡುತ್ತೇವೆ, ಹುಟ್ಟಿದ ಕೂಡಲೇ ಮಕ್ಕಳು ಮರಣ ಹೊಂದುವ ನಿಮ್ಮ ಪ್ರಾರಬ್ಧವು ಇಂದಿಗೆ ಕೊನೆಯಾಯಿತು''. ಈ ಫಲವು ಬಹಳ ಬೀಜವುಳ್ಳದ್ದು ಇದರಿಂದ ನಿಮಗೆ ಅನೇಕ ಪುತ್ರರಾಗುವರು ಈ ಫಲವನ್ನು ನೀವೇ ನಿಮ್ಮ ಪತ್ನಿಗೆ ನೀಡಿರಿ ಎಂದರು. ಮುಂದೆ ಆಚಾರ್ಯರ ಅನುಗ್ರಹದಿಂದ ಅವರಿಗೆ ಪುತ್ರ ಜನನವಾಗಲು ಆಚಾರ್ಯರ ಅನುಗ್ರಹದ ಸ್ಮರಣೆಗಾಗಿ ಆ ಮಗುವಿಗೆ ಜಯತೀರ್ಥ ಎಂದೇ ನಾಮಕರಣ ಮಾಡಿದರು. (ಮುಂದೆ ಅವರಿಗೆ ಅನೇಕ ಜನ ಮಕ್ಕಳಾದರಂತೆ. ಇಂದಿಗೂ ಅವರ ಔರಸ ವಂಶ ಇದ್ದು ವಿಷ್ಣುತೀರ್ಥರಿಂದ ಪ್ರತಿಷ್ಠಾಪಿತ ನರಸಿಂಹದೇವರ ಉತ್ಸವವನ್ನು ವೈಭವದಿಂದ ನಡೆಸಿಕೊಂಡು ಹೋಗುತ್ತಿದ್ದಾರೆ).

ಭೋ ರಾಮಾಚಾರ್ಯ ಅಸ್ಮಾಭಿಸ್ತುಭ್ಯಂ ಏತಾವತ್ಪರ್ಯಂತಂ ಜ್ಞಾನ ಸುತ ಮಾತ್ರಂ ದತ್ತಮ್ । ಅಧುನಾ ಪ್ರಸಿದ್ಧಮಪಿ ತಂ ದಾಸ್ಯಾಮಃ । ಮೃತಾಪತ್ಯಾಖ್ಯ ದೋಷಸ್ತ ದೈವ ಅಪಗಚ್ಛತು । ಅಸ್ಯಫಲಸ್ಯ ಬಹುಬೀಜ ಗರ್ಭತ್ವಾತ್ ಬಹವಸ್ತೇ ಪುತ್ರಾಃ ಭವಿಷ್ಯಂತಿ ಇದಂ ಫಲಂ ಭಾರ್ಯಾಯೈ ತ್ವಮೇವ ದೇಹಿ ॥

ತದಾ ಪರಮ ಸಂತುಷ್ಟಾಃ ಪಿತೃಮಾತೃ ಪಿತಾಮಹಾದ್ಯಾ ಸ್ತದನುಗ್ರಹ ಸ್ಮರಣಾಯ ನಾಮಕರಣ ಸಮಯೇ ಜಾತಸ್ಯ ಶಿಶೋಃ ಜಯತೀರ್ಥನಾಮಚಕ್ರುಃ । ಅಥ ಕಾಲತಃ ಸಾ ಅನ್ಯಾನಪಿ ಸುತಾನ್ ಸುಷುವೇ - ಪಂಚರತ್ನ ಪ್ರಭಾ (ಅಡಿ ಟಿಪ್ಪಣಿ)

## ಅಪಮೃತ್ಯು ಪರಿಹಾರ

ಆಚಾರ್ಯರು ಮೊರಬದಲ್ಲಿರುವಾಗಲೇ ಅವರ ಭಗವದ್ಭಕ್ತಿ ತಪಸ್ಸಿದ್ಧಿ, ವಾಕ್ ಶುದ್ಧಿಗಳನ್ನು ಜಗತ್ತಿಗೆ ಪ್ರಕಟಪಡಿಸುವ ಮತ್ತೊಂದು ಘಟನೆ ನಡೆಯಿತು. ಒಂದು ದಿನ ಪಾಠಗಳೆಲ್ಲ ಮುಗಿದ ನಂತರ ತಮ್ಮ ಪ್ರಮುಖ ಶಿಷ್ಯರೊಂದಿಗೆ ಏಕಾಂತದಲ್ಲಿ ತತ್ವಚಿಂತನೆ ನಡೆಸುತ್ತಿದ್ದಾಗ ಆಚಾರ್ಯರು ಇಂದು ನಮಗೆ ಅಡುಗೆ ಮಾಡುವುದು ಬೇಡ, ನಾವು ಭೋಜನ ಸ್ವೀಕರಿಸುವುದಿಲ್ಲ ಎಂದು ಹೇಳಿದರು. ಆಚಾರ್ಯರ ಮಾತನ್ನು ಕೇಳಿದ ಶಿಷ್ಯರಿಗೆ ಕುತೂಹಲವಾಯಿತು. ಈ ದಿನದ ವಿಶೇಷವೇನೆಂದು ಶಿಷ್ಯರು ಪ್ರಶ್ನೆಮಾಡಲು ಆಚಾರ್ಯರು ಹೇಳಿದರು 'ನಿಮ್ಮ ಐದಾರು ಜನಗಳ ಮಧ್ಯದಲ್ಲಿ ಒಬ್ಬನಿಗೆ ಅಪಮೃತ್ಯು ಯೋಗವಿದೆ' ನಾವು ಮೂರು ದಿನ ಉಪವಾಸದಿಂದ ಅನುಷ್ಠಾನ ಮಾಡಿ ಆ ಪುಣ್ಯವನ್ನು ಅವನಿಗೆ ಧಾರೆಯೆರೆದರೆ ಅಪಮೃತ್ಯು ಯೋಗವು ಪರಿಹಾರವಾಗುತ್ತದೆ. ಇಲ್ಲದೇ ಹೋದರೆ ಆತ ಬದುಕಲಾರ. ಅಪಮೃತ್ಯು ಯಾರಿಗೆ ಎಂಬ ಸಂದೇಹಬೇಡ, ಮೂರು ದಿನಗಳ ನಂತರ ಆತನಿಗೆ ಸ್ಪಷ್ಟವಾಗಿ ತೋರಿಬರಲಿದೆ, ಆದುದರಿಂದ ನಾವು ಮೂರು ದಿನಗಳ ಕಾಲ ಉಪವಾಸ ಆಚರಿಸುತ್ತೇವೆ. ನೀವು ನಿಶ್ಚಿಂತೆಯಿಂದ ಭೋಜನಾದಿಗಳನ್ನು ನೆರವೇರಿಸಿ ಎಂದು ಹೇಳಿದರು. ''ಭವತ್ಸ್ವೇನ ಪಂಚಷು ಶಿಷ್ಯೇಷು ಮಧ್ಯೇ ಅಪಮೃತ್ಯುರೇಕಸ್ಯ ಆಗತೋಸ್ತಿ । ದಿನತ್ರಯಮನಶನೇನ ಉಷಿತ್ವಾ ಅಸ್ಮಾಭಿಸ್ತತ್ಪುಣ್ಯೇ ದತ್ತೇ ಸೋಽಪಗಚ್ಛತಿ । ನಚೇತ್ಸವಿನಶ್ಯತ್ಯೇವ । ತತ ಕಸ್ಯ ಅಪಮೃತ್ಯುರಿತ್ಯೇವ ನ ಸಂಶಯಃ ಕಾರ್ಯಃ । ದಿನತ್ರಯಾಂತೇ ತಸ್ಯೈವ ಸ್ಪಷ್ಟಂ ಪ್ರತೀಯ ಮಾನತ್ವಾತ್ । (ಪಂಚ ರತ್ನ ಪ್ರಭಾ. ಅಡಿ ಟಿಪ್ಪಣಿ)

ತಾವು ಹೇಳಿದಂತೆ ಜಯತೀರ್ಥಾಚಾರ್ಯರು ಮೂರು ದಿವಸಗಳವರೆಗೆ ಉಪವಾಸ ಮಾಡಿದರು. ಆಚಾರ್ಯ ಶಾಸ್ತ್ರದ ಪ್ರವಚನದಿಂದಲೇ ತೃಪ್ತಿ ಪಡೆಯುವ ಆಚಾರ್ಯರಿಗೆ ಉಪವಾಸದ ಕ್ಲೇಶವೆಲ್ಲಿ ? ತಮ್ಮ ಬಾಲ್ಯದಲ್ಲಿಯೇ ಗುರುಪುತ್ರನ ಅಪಮೃತ್ಯು ಪರಿಹಾರಕ್ಕಾಗಿ ಒಂದು ಸಪ್ತಾಹ ಉಪವಾಸ ಮಾಡಿದ ಜಯತೀರ್ಥಾಚಾರ್ಯರಿಗೆ ಮೂರು ದಿವಸಗಳ ಉಪವಾಸವು ಯಾವುದೇ ರೀತಿಯ ತಾಪವುಂಟು ಮಾಡಲಿಲ್ಲ. ಪ್ರತ್ಯುತ ಮೊದಲಿಗಿಂತಲೂ ಹೆಚ್ಚಾಗಿ ಶ್ರೀಮನ್ನ್ಯಾಯಸುಧಾ ಗ್ರಂಥದ ಅವಲೋಕನದಲ್ಲಿ ಮುಳುಗಿ ಆನಂದ ಸಾಗರದಲ್ಲಿ ತೇಲಿದರು. ''ಶ್ರೀ **ಜಯಾರ್ಯನು ಮೂರು ದಿವಸ ಉಪವಾಸ ಪರನಾದಾ । ಶ್ರೀಜಯಾರ್ಯ ಮುನೀಂದ್ರ ವದನ ಸ । ರೋಜನಿರ್ಗತ ಸುದೆಯ ಸೇವಿಸಿ । ಭೋಜನದಕ್ಕಿಂತಲು ಹೆಚ್ಚಿನ ಸೌಖ್ಯವೈದಿದನು ॥**

ಮೂರನೆಯ ದಿವಸ ರಾತ್ರಿ ಕಳೆಯುತ್ತಿರಲು ಆಚಾರ್ಯರ ಪುತ್ರರಾದ ಕೃಷ್ಣಾರ್ಯರಿಗೆ ಭಯಂಕರ ಸ್ವಪ್ನವಾಯಿತು. ಹೆದರಿಕೆ ಹುಟ್ಟಿಸುವಂತೆ ವಿಕಾರವಾಗಿದ್ದ ಇಬ್ಬರು ಯಮದೂತರು ತೋರಿ ಅವರನ್ನು ಎಳೆದೊಯ್ಯ ತೊಡಗಿದರು. ಮಾರ್ಗ ಮಧ್ಯದಲ್ಲಿ ಯಮದೂತರು ಅವರಿಗೆ ವಿಚಿತ್ರ ಹಿಂಸೆ ನೀಡತೊಡಗಲು ಭಯ ವಿಹ್ವಲರಾದ ಕೃಷ್ಣಾಚಾರ್ಯರು ಗಟ್ಟಿಯಾಗಿ ಕಿರುಚಲು ಆಚಾರ್ಯರು ದರುಶನ ನೀಡಿ, ಅಂಜಬೇಡ ಎಂದು ಅಭಯ ನೀಡಿ ಮೈದಡವಿ ಸಂತೈಸಿದರು.

ಮರುದಿವಸ ಪ್ರವಚನದ ಸಂದರ್ಭದಲ್ಲಿ ಕೃಷ್ಣಾಚಾರ್ಯರು ತಂದೆಯವರಿಗೆ ದೀರ್ಘದಂಡ ಪ್ರಣಾಮಗಳನ್ನು ಮಾಡಿ ಕಣ್ಣೀರಿಡುತ್ತಾ ಆಚಾರ್ಯರ ಅನುಗ್ರಹವನ್ನು ಹೇಳಿಕೊಂಡರು.

**ಕನಪಿನಲೀಪರಿ ಕಂಡೆ ಸ್ವಾಮಿ । ನಾಬಹಳಂಜಿಕೊಂಡೆ ।**
**ಕೊರಳೊಳು ಪಂಕಜ ಕರವೀರ ಕುಸುಮದ ಸರಳ ಮಾಲೆಗಳ**
**ಬರಿಯಮೈಲಿರುವೆ ಉಟ್ಟಿರುವ ವಸ್ತ್ರಗಳಿಲ್ಲದ ಪರಿ ವಿಪರೀತವ ಕಂಡೆ ।**
**ಎಣ್ಣೆ ಮೈಯಲ್ಲಿ ನುಣ್ಣಗೆ ಲೇಪಿಸಿ ಎಣ್ಣೆಯ ಭಕ್ಷಗಳುಂಡೆ ।**
**ಸಣ್ಣ ಮಾತಿಲ್ಲದು ಕಣ್ಣಿಂದ ಕರೆ ಟೋಣಪ್ಯಾರನಿಬ್ಬರ ಕಂಡೆ ।**
**ಕದನಕರಾಲವರವದನ ವಿಕಾರವು ಅಧರ ಜೋತ್ಯಾಡೋದು ಕಂಡೆ ।**
**ವದನ ಕೆಂಪಗೆ ಮಾಡಿ ವದರುತ ಬರುವಾಗ ಗದಗದ ನಡುಗಿಕೊಂಡೆ ।**
**ಥಣ್ಣೀರು ಗೊಜ್ಜುತ ಬೆನ್ನತ್ತಿ ಬರುವದು ಉನ್ನತವಿರುವವರ ಕಂಡೆ**

**ಇನ್ನೇನು ಗತಿಯೆಂದು ಮುಂದೆ ನಾ ಓಡುತ ನನ್ನೊಳು ನಾನೊಂದುಕೊಂಡೆ ।**
**ದಿಕ್ಕು ಯಾರಿಲ್ಲೆಂದು ದುಃಖದಿಂದಳುವಾಗ ಥಕ್ಕನೆ ನಿಮ್ಮನ್ನು ಕಂಡೆ ।**
**ಅಂಜಲಿಬ್ಯಾಡ ಚಿರಂಜೀವನು ನೀ ಎಂಬೋ ಮಂಜುಳ ಸ್ವರ ಕೇಳಿಕೊಂಡೆ ।**
**ಅಂಜಿಕೆ ಬಿಡದೆ ನಿರಂಜನ ಗುರುಪಾದ ।**
**ಕಂಜದಲ್ಲೆ ಬಿದ್ದು ಕೊಂಡೆ । ನೇಮದಿ ಸೇವೆಯ ಮಾಡಿ**
**ನಾ ಬಂದಂಥ ಆ ಮಹಾಭಯ ಕಳಕೊಂಡೆ ॥**

ಗುರು ಪುತ್ರರು ಗದ್ಗದ ಕಂಠದಿಂದ ಹೇಳಿಕೊಂಡ ಈ ವೃತ್ತಾಂತವನ್ನು ಕೇಳಿ ಎಲ್ಲರೂ ಆಶ್ಚರ್ಯ ಚಕಿತರಾದರು. ಅಪಮೃತ್ಯು ಬಂದದ್ದು ಯಾರಿಗೆ ಎನ್ನುವುದು ಈ ಮೂಲಕ ಬಯಲಾಗಿತ್ತು. ತಮ್ಮ ಗುರುಗಳು ಸಾಮಾನ್ಯರಲ್ಲ, ಮೃತ್ಯುವನ್ನೇ ಹಿಮ್ಮೆಟ್ಟಿಸಿದ ಮೃತ್ಯುಂಜಯರು ಎಂಬುದು ಅವರಿಗೆ ಮನದಟ್ಟವಾಗಿತ್ತು. ಆ ಮೂಲಕ ಮೊದಲೇ ಇದ್ದ ಗುರು ಭಕ್ತಿಯು ಇನ್ನೂ ಹೆಚ್ಚಾಗಿ ಗುರುಗಳಲ್ಲಿ ಅಪಾರ ಗೌರವ ಮೂಡಿತು.

(''ಶ್ರೀವಿಷ್ಣು ತೀರ್ಥೋಽಪಿ ತಥೋದರಸ್ಥಾಮ್ । ಮೃತ್ಯುಂ ವಿದಾರ್ಯ ಅಜನಯತ್ ಪುನರ್ಹಿಮಾಂ ಕಾತಸ್ಯಚಾತ್ಮಾರ್ಪಣತಃ ಕೃತಿಃ ಪರಾ । ಭಗವಂತನ ದಶಾವತಾರಗಳನ್ನು ಹಾಗೂ ಕೊನೆಗೆ ಶುಕಾಚಾರ್ಯರನ್ನು ದೃಷ್ಟಾಂತವಾಗಿಸಿ ಅದೇ ರೀತಿ ವಿಷ್ಣುತೀರ್ಥರು ನನ್ನ ಉದುರದಲ್ಲಿದ್ದ ಮೃತ್ಯುವನ್ನು ನಿವಾರಿಸಿ ಮತ್ತೆ ಪುನರ್ಜನ್ಮ ನೀಡಿದ್ದಾರೆ. ಅವರಿಗೆ ಆತ್ಮಸಮರ್ಪಣೆಯೇ ನಾನು ಸಲ್ಲಿಸುವ ಉತ್ತಮ ಸೇವೆ ಎಂದು ಪ್ರಾರ್ಥಿಸುವ ಮೃತ್ಯುಮಾರಣ ಸ್ತೋತ್ರ''ವೊಂದು ಲಭ್ಯವಿದೆ. (ಇದರ ಕರ್ತೃಗಳು ಯಾರೆಂದು ನಿಖರವಾಗಿ ತಿಳಿದು ಬಂದಿಲ್ಲ). ಮೇಲೆ ತಿಳಿಸಿದ ಘಟನೆಯಿಂದಲೂ, ಕೃಷ್ಣಾಚಾರ್ಯರು ರಚಿಸಿದ ಬೇರೆ ಸ್ತೋತ್ರಗಳ (ವಿಷ್ಣುತೀರ್ಥ ಗುರು ಸ್ತೋತ್ರ, ಪರಿಶಿಷ್ಟದಲ್ಲಿ ಕೊಟ್ಟಿದೆ) ಶೈಲಿಯು ಹೀಗೆ ಇರುವುದರಿಂದಲೂ ಈ ಕೃತಿಯು ಬಹುಶಃ ಕೃಷ್ಣಾಚಾರ್ಯರ ರಚನೆಯೇ ಆಗಿರಲು ಸಾಕು. (ಇದು ಪರಿಶಿಷ್ಟದಲ್ಲಿ ಮುದ್ರಿಸಲ್ಪಟ್ಟಿದೆ.)

## ಪ್ರವಚನಕೆ ಬಂದರು ಶೇಷ ದೇವರು

ಮೊರಬದಲ್ಲಿ ಇರುವಷ್ಟು ಕಾಲವೂ ಆಚಾರ್ಯರು ಪ್ರತಿನಿತ್ಯ ಸರ್ವಮೂಲ ಗ್ರಂಥಗಳ ಪ್ರವಚನ ನೀಡುತ್ತ ಸಜ್ಜನರನ್ನು ಮೋಕ್ಷ ಮಾರ್ಗಿಗಳನ್ನಾಗಿ ಮಾಡಿದರು.

**''ಕಾಲಕಳಿಯದೆ ಮುಂದೆ ಜಯಗುರು ಮೂಲ ಮೂವತ್ತೇಳು ಗ್ರಂಥದ ಮ್ಯಾಲಟೀಕಾ ಗ್ರಂಥ ತೊಂಭತ್ತು ಬೋಧಿಸುತ್ತಾ । ಕಾಲ ಕಾಲಕೆ ಬಂದ ಕಲಿಭಯ । ಬೈಲ ಮಾಡುತ ಶಿಷ್ಯ ಜನಕೆ ವಿಶಾಲ ಮೋಕ್ಷದ ಮಾರ್ಗ ತೋರಿಸುತ್ತಾ'' ।** ಟೀಕಾಕೃತ್ಪಾದರಿಗೆ ಪರಮಾನಂದ ಉಂಟು ಮಾಡಿದರು. ಟೀಕಾಕೃತ್ಪಾದರ ಸೇವೆಗಾಗಿಯೇ ಆಚಾರ್ಯರ ಅವತಾರವಾಗಿತ್ತಲ್ಲವೇ? ತಮ್ಮ ಸೇವೆಯಲ್ಲೇ ನಿರತನಾದ ಶಿಷ್ಯನ ಹಿಂದೆಯೇ ನಿರಂತರ ಇರುತ್ತಾ, ಆಗಾಗ ಮಾರ್ಗದರ್ಶನ ನೀಡುತ್ತಾ ಆಚಾರ್ಯರ ಬದುಕಿನ ಮಾರ್ಗದರ್ಶನದ ಸಮಸ್ತ ಹೊಣೆಯನ್ನು ಟೀಕಾಕೃತ್ಪಾದರೇ ಹೊತ್ತಿದ್ದರು. ಪೂರ್ವಜನ್ಮದಲ್ಲಿ ಜಯತೀರ್ಥರಿಂದಲೇ ಅವರ ಗ್ರಂಥಗಳನ್ನು ಅಧ್ಯಯನ ಮಾಡಿದ್ದ (ಯದಸ್ಮದಧ್ಯಾಪಿತ ಶಿಷ್ಯ ಶೇಖರಃ) ಆಚಾರ್ಯರ ಪ್ರವಚನದಲ್ಲಿ ಜಯತೀರ್ಥರ ಭಾವವು ತಾನೇ ತಾನಾಗಿ ತುಂಬಿ ಬರುತ್ತಿತ್ತು. ತಮ್ಮ ಅಭಿಪ್ರಾಯಕ್ಕನುಗುಣವಾದ ಶಿಷ್ಯನ ಪಾಠ ಪ್ರವಚನಗಳನ್ನು ಆಲಿಸಲು ಸ್ವಯಂ ಜಯತೀರ್ಥರೇ ಸರ್ಪರೂಪ ಧರಿಸಿ ಪ್ರವಚನ ಶಾಲೆಗೆ ಆಗಮಿಸುತ್ತಿದ್ದರು. ಆಗೊಂದು ವಿಶೇಷವಾದ ದೈವೀ ಸುಗಂಧವು ಪ್ರವಚನ ಮಂದಿರವನ್ನು ವ್ಯಾಪಿಸುತ್ತಿತ್ತು. ಅಲ್ಲಿ ಕುಳಿತವರಿಗೆಲ್ಲ ಆ ಸುಗಂಧದ ದಿವ್ಯ ಅನುಭೂತಿ ಉಂಟಾಗುತ್ತಿತ್ತು. ಆದರೆ ಸರ್ಪ ಮಾತ್ರ ಯಾರಿಗೂ ಕಾಣುತ್ತಿರಲಿಲ್ಲ. ಆಚಾರ್ಯರಿಗೆ ಮಾತ್ರ ಸರ್ಪ ರೂಪದ ಟೀಕಾರ್ಯರ ದರ್ಶನವಾಗುತ್ತಿತ್ತು. **''ನನ್ನ ಮೈಯ ಸುಗಂಧ ಮಾತ್ರದಿ ಘನ್ನವ್ಯಾಕುಲರಾದರಿವರು । ನನ್ನ ನೋಡಿದರಂತು ಅಂಜಿಕೆಯಿಂದ ಓಡುವರು''** ನನ್ನ ಮೈಯ ಸುಗಂಧದಿಂದಲೇ ವ್ಯಾಕುಲರಾದ ಇವರು ಸರ್ಪರೂಪದ ನನ್ನನ್ನು ನೋಡಿದರೆ, ಖಂಡಿತವಾಗಿಯೂ ಅಲ್ಲಿಂದ ಪಲಾಯನ ಮಾಡುವರು. ಪ್ರವಚನವು ನಿಂತು ಹೋಗುವುದು. ಹೀಗೆಂದು ಚಿಂತಿಸಿದ ಜಯಾರ್ಯರು ಆಚಾರ್ಯರಿಗೆ ಮಾತ್ರ ತಮ್ಮ ರೂಪವ ತೋರಿದರು. **(ತನ್ನ ರೂಪವ ತನ್ನ ಶಿಷ್ಯಗೆ ಮಾತ್ರ ತೋರಿದರು.)**

ಜಯತೀರ್ಥರ ದರ್ಶನದಿಂದ ಪುಲಕಿತರಾದ ಆಚಾರ್ಯರು ಇನ್ನೂ ಹೆಚ್ಚಿನ ಉತ್ಸಾಹಭರಿತರಾಗಿ ಪ್ರವಚನ ಮುಂದುವರೆಸುತ್ತಿದ್ದರು. ಸುಗಂಧದ ಮೂಲಕ ಸುಧಾರ್ಯರು ಆಗಮಿಸಿದಾಗ ಆಚಾರ್ಯರ ಪ್ರವಚನದ ಶೈಲಿಯಲ್ಲಿ ಆಗುತ್ತಿದ್ದ ವಿಶೇಷ ಬದಲಾವಣೆ ಎಲ್ಲ ಶಿಷ್ಯರ ಅನುಭವಕ್ಕೂ ಬರುತ್ತಿತ್ತು.

**''ಸೋಹದೇವ ಮಮ ಭಾವ ವಿಶೇಷಾನ್ ದರ್ಶಯನ್ ಪ್ರವಚನಾದಿಷು ನಿತ್ಯಮ್ ।**
**ಸಂಶೃಣೋಮಿ ನಿವಸಾಮಿ ತನೋಮಿ ಪ್ರೇಷ್ಯರೂಪಮಸಿ ಮೇವಿಜನೇ ತೇ''**

ಮುನ್ನ ಈ ಪ್ರವಚನದ ಮಹಿಮೆಯ । **ಇನ್ನೂ ವಿಸ್ತರ ಪೇಳಲಾಗದು ಮುನ್ನ ಸಕಲ ಪ್ರಮೇಯಗಳು ಪ್ರವಚನ ಕಾಲಕ್ಕೆ । ಚೆನ್ನವಾಗಿ ತೋರುತಿಹವು ಇನ್ನೂ ಇದು ಆಶ್ಚರ್ಯವಲ್ಲವು । ಚೆನ್ನಿಗರು ಗುರುಗಳೊಳಗೆ ಪ್ರಸನ್ನರಾಗಿಹರು ।** ಎಂದು ಶಿಷ್ಯರು ತಮ್ಮ ಗುರುಗಳ ಮೇಲಿರುವ ಜಯತೀರ್ಥ ಅನುಗ್ರಹವನ್ನು ಅಂಥ ಗುರುಗಳನ್ನು ಪಡೆದ ತಮ್ಮ ಭಾಗ್ಯವನ್ನು ನೆನೆದು ಸಂಭ್ರಮಿಸುತ್ತಿದ್ದರು.

ಹೀಗಿರುತ್ತಿರಲು ಆಚಾರ್ಯರಿಗೆ ನೀನಿದ್ದಲ್ಲೇ ಬದರೀಶನ ದರ್ಶನವಾಗುವುದೆಂಬ ಜಯತೀರ್ಥರ ವಾಕ್ಯದ ಸ್ಮರಣೆಯಾಯಿತು. ಬದರಿನಾರಾಯಣನ ದರ್ಶನ ಯಾವಾಗ ಆಗುವುದೆಂಬ ಅವರ ಕಾತರತೆಯನ್ನು ಅರಿತ ಜಯತೀರ್ಥರು ಮತ್ತೆ ಯತಿ ವೇಷದಿಂದ ಸ್ವಪ್ನದಲ್ಲಿ ದರ್ಶನ ನೀಡಿ ನಿರ್ದೇಶನ ಮಾಡಿದರು. ನಿಮ್ಮ ಶೂರ್ಪಗ್ರಾಮದ ವಾಸ ಇಲ್ಲಿಗೆ ಸಾಕು. ಇಲ್ಲಿ ನೀವು ಮಾಡಬೇಕಾದ ಕಾರ್ಯ ಮುಗಿಯಿತು. ಶಿಷ್ಯರನ್ನು ಬೀಳ್ಕೊಟ್ಟು ಹೊರಡಿರಿ, ಮುಂದೆ ನಿಮಗೊಂದು ಜಾಗವು ದೊರಕುವುದು. ಅಲ್ಲೇ ನಿಮಗೆ ಬದರಿ ವಾಸದ ಫಲ ದೊರಕುವುದು. ಸಾಧಕರು ಒಂದೇ ಜಾಗದಲ್ಲಿ ಬಹಳ ದಿನಗಳ ಕಾಲ ಇರಬಾರದು. ''ಸನ್ನಿಕರ್ಷಾಚ್ಚ ಸೌಹಾರ್ದಂ ಜಾಯತೇ ಸ್ಥಾವರೇಷ್ವಪಿ'' ಬಹಳ ದಿನಗಳ ಕಾಲ ಒಂದೇ ಕಡೆಗಿದ್ದರೆ ಅಲ್ಲಿರುವ ಜಡ ಪದಾರ್ಥಗಳ ಮೇಲೂ ಸ್ನೇಹ ಬೆಳೆಯುವುದು. ನನ್ನದೆಂಬ ಮಮಕಾರ ಮೂಡುವುದು. ಇದು ರಾಮಾಯಣದ ಮಾತು. ಆದ್ದರಿಂದ ತನ್ನ ಸದಾಚಾರ ಮತ್ತು ಉಪದೇಶಗಳಿಂದ ಜಗತ್ತಿಗೆ ಮಾರ್ಗದರ್ಶನ ಮಾಡುವ ಸಾಧಕರು ಒಂದೇ ಜಾಗದಲ್ಲಿ ಬಹಳ ದಿನಗಳ ಕಾಲ ವಾಸ ಮಾಡಬಾರದು ನೀವಿನ್ನು ಇಲ್ಲಿಂದ ಹೊರಡಿರಿ ಎಂದು ಆಜ್ಞೆ ಮಾಡಿದರು. ಎಚ್ಚೆತ್ತು ಆಚಾರ್ಯರು ಜಯತೀರ್ಥರ ಆದೇಶದಂತೆ ಮೊರಬದಿಂದ ಹೊರಡಲು ಅಣಿಯಾದರು ತಮ್ಮ ಶಿಷ್ಯರನ್ನು ಕರೆದು ಆದೇಶ ನೀಡಿದರು. ನೀವೆಲ್ಲ ಇಲ್ಲಿಯವರೆಗೆ ನಮ್ಮ ಸೇವೆ ಮಾಡಿ ಯಥಾ ಯೋಗ್ಯವಾಗಿ ಆಚಾರ್ಯರ ಶಾಸ್ತ್ರಗಳನ್ನು ಶ್ರವಣ ಮಾಡಿ ಜ್ಞಾನ ಸಂಪಾದನೆ ಮಾಡಿದ್ದೀರಿ ಇನ್ನು ನಾವು ಇಲ್ಲಿಂದ ಹೊರಡಲಿದ್ದೇವೆ. ನೀವು ನಿಮ್ಮ ಗ್ರಾಮಗಳಿಗೆ ಹೋಗಿ ಪಾಠ ಪ್ರವಚನಗಳನ್ನು ಮಾಡಿಕೊಂಡಿರಿ. ದಿಷ್ಟನಾಮಕ ಹರಿಯ ಪೂರ್ಣ ಅನುಗ್ರಹ ನಿಮಗಿದೆ ಬೇಡಿ ಬಂದವರಿಗೆ ಇಲ್ಲ ಎನ್ನದೇ ನಿಮ್ಮ ವಿದ್ಯೆಯನ್ನು ಬೋಧಿಸಿರಿ ನಿಮಗೆ ಮಂಗಳವಾಗಲಿ ಎಂದು ಆಶೀರ್ವದಿಸಿದರು.

ಆಚಾರ್ಯರು ಮೊರಬದಿಂದ ಹೊರಡುವರೆಂಬ ವಾರ್ತೆ ಕೇಳದ ಜನಗಳೆಲ್ಲ ಬಹಳ ದುಃಖಿತರಾಗಿ ಅಲ್ಲಿಂದ ಹೊರಡದಂತೆ ಆಚಾರ್ಯರನ್ನು ಪ್ರಾರ್ಥಿಸಿದರು. ಅವರನ್ನು ಸಮಾಧಾನ ಪಡಿಸಿದ ಆಚಾರ್ಯರು ಈಶನಿಚ್ಚೆ ಹೀಗಿಲ್ಲ, ಗುರುಗಳ ಆಜ್ಞೆಯಾಗಿದೆ.

ನಾವು ಇಲ್ಲಿಂದ ಹೊರಡುತ್ತೇವೆ. ನೀವೆಲ್ಲ ವಿಶೇಷವಾಗಿ ನಮ್ಮ ಸೇವೆ ಮಾಡಿದ್ದೀರಿ ನಿಮಗೆ ಭಗವಂತನ ವಿಶೇಷವಾದ ಅನುಗ್ರಹವಾಗಲಿ ಎಂದು ಆಶೀರ್ವದಿಸಿ ಅಲ್ಲಿಂದ ಹೊರಡಲು ಅಣಿಯಾದರು. ತಮ್ಮ ಪರಿವಾರದೊಂದಿಗೆ ಪ್ರಯಾಣ ಬೆಳೆಸಿದ ಆಚಾರ್ಯರನ್ನು ಕೆಲವು ಮುಖ್ಯ ಶಿಷ್ಯರು ಮಾತ್ರ ಹಿಂಬಾಲಿಸಿ ನಡೆದರು.

## ಮುನವಳ್ಳಿಯಲ್ಲಿ ಮುನಿಚರಿತರು

ಶೂರ್ಪ ಗ್ರಾಮದಿಂದ ಹೊರಟ ಆಚಾರ್ಯರು ಮಾರ್ಗ ಮಧ್ಯದಲ್ಲಿ ಸಿಕ್ಕುವ ಗ್ರಾಮಗಳ ದೇಗುಲಗಳಲ್ಲಿ ತಂಗುತ್ತ ತಮ್ಮ ಉಪದೇಶಾಮೃತದಿಂದ ಗ್ರಾಮಸ್ಥರ ಧರ್ಮ ಶ್ರದ್ಧೆಯನ್ನು ಹೆಚ್ಚಿಸುತ್ತ ಮುಂದೆ ನಡೆದರು. ಜನ ಸಮ್ಮರ್ದದಿಂದ ಯಾವಾಗಲೂ ದೂರವಿರುತ್ತಿದ್ದ ಆಚಾರ್ಯರು ''**ಮಂದಿ ಇಲ್ಲದೇ ಇದ್ದ ಸ್ಥಳವೇ ಛಂದ ನಮಗೆಂದಿಗಾದರು ಮಂದಿ ಇದ್ದಲ್ಯಸುರರೇ ಇರುತಿಹರು**'' ಎಂದು ನಿರ್ಜನವಾದ ಅರಣ್ಯ ಪ್ರದೇಶಗಳಲ್ಲೇ ವಾಸಿಸುತ್ತಿದ್ದರು. ಹೀಗೆ ಗ್ರಾಮದಿಂದ ಗ್ರಾಮಕ್ಕೆ ಸಂಚರಿಸುತ್ತ ಬರುತ್ತಿರಲು ಧಾರವಾಡ ಪ್ರಾಂತದ ಸವದತ್ತಿ ಸಮೀಪದ 'ಮುನಿವಳ್ಳಿ'ಯ ಸಮೀಪ ಉತ್ತರ ವಾಹಿನಿಯಾಗಿ ಹರಿಯುತ್ತಿರುವ ಮಲಾಪಹಾರಿ (ಮಲಪ್ರಭಾ) ನದಿ ತೀರದ ಪ್ರಶಾಂತ ವಾತಾವರಣ ಅವರಿಗೆ ಬಹಳ ಮೆಚ್ಚಿಗೆಯಾಯಿತು. ''**ಶುದ್ಧ ಚಲ್ವಿಕೆಯಿಂದ ಜನರಿಗೆ ಮುದ್ದು ಬರುತಿರುವಂಥ ಪರಮ ಪ್ರಸಿದ್ಧ ಮುನಿವಳ್ಳಿ**'' ತಮ್ಮ ಸಾಧನೆಗೆ ತಕ್ಕುದಾದ ಏಕಾಂತ ಸ್ಥಳವೆಂದು ಅವರಿಗೆ ತೋರಿತು. ''**ಪಲ್ಲೀತಿ ಪ್ರಥಿತತರಾಂ ತತೋ ಮುನೀನಾಂ ಪ್ರಾಪಾಲಂ ವಿಜನವನಂ ಸ ಕಾಮಯಾನಃ**''. ಹಲವಾರು ಮುನಿಪುಂಗವರ ಸಾಧನ ಕ್ಷೇತ್ರವೂ, ಗೌತಮ ಋಷಿಗಳ ತಪಸ್ಸಿನ ಭೂಮಿಯೂ ಆದಂತಹ ಆ ಪವಿತ್ರ ಪ್ರದೇಶದಲ್ಲಿ ಅನುಷ್ಠಾನ ಪರವಾಗಿ ನೆಲೆಸಲು ಬಯಸಿದರು. ''**ಅಲ್ಲೇ ಬದರಿಯಲ್ಲಿ ಇರುವೋದೆಲ್ಲ ಇರುತಿಹುದು. ಅಲ್ಲೆ ವಾಸ ಮಾಡಿದನು ಮನದಲ್ಲಿ ಸಂಭ್ರಮಪಡುತ । ಗುರುಗಳೇ ಇಲ್ಲೆ ಈ ಸ್ಥಳ ನಮಗೆ ನಿರ್ಮಿಸಿಕೊಟ್ಟರೆಂತ್ಯೆಂದು ಭಾವಿಸಿ**'' ಅಲ್ಲೇ ಬದರೀಶನನ್ನು ಸ್ಮರಿಸುತ್ತ ಶಿಷ್ಯ ಪರಿವಾರದೊಂದಿಗೆ ಅಲ್ಲಿಯೇ ಪರ್ಣಕುಟೀರವೊಂದನ್ನು ನಿರ್ಮಿಸಿಕೊಂಡು ವಾಸಿಸತೊಡಗಿದರು.

ಸೇವಿಸಿದವರ ಪಾಪಗಳನ್ನು ಕಳೆಯುವುದರಿಂದ ಮಲಾಪಹಾರಿ ಎಂದು ಖ್ಯಾತಳಾದ ಮಲಪ್ರಭಾ ನದಿ ತೀರದ ಪ್ರದೇಶದಲ್ಲಿ ಆಚಾರ್ಯರ ಸಾಧನೆ ಮುಂದುವರೆಯಿತು. ''ಮಲಹಾರ್ಯಾಂ ಜನಾರ್ದನಮ್'' ಎಂದು ಹೇಳಿದಂತೆ ಮಲಪ್ರಭಾ ನದಿಯಲ್ಲಿ

ಜನಾರ್ದನನನ್ನು ಸ್ಮರಿಸುತ್ತಾ ಸ್ನಾನಾದಿಗಳನ್ನು ನೆರವೇರಿಸಿಕೊಂಡು ನಿತ್ಯ ಕರ್ಮಗಳನ್ನು ನೆರವೇರಿಸಿಕೊಂಡು ನಿರಂತರ ಪಾಠ ಪ್ರವಚನದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪೂರೈಸಿದ್ದ ಆಚಾರ್ಯರು ಈಗ ವಾನಪ್ರಸ್ಥಾಶ್ರಮಿಯಾಗಿ 'ಮುನಿವಳ್ಳಿ' ಬಳಿಯ ವಿಜನ ದೇಶದಲ್ಲಿ ಮುನಿಗಳಂತೆ ಜೀವಿಸತೊಡಗಿದರು. ಪತ್ನಿಯೊಂದಿಗೆ ಇದ್ದರೂ ಏಕಾಪತ್ಯ ಜನನ ಪರ್ಯಂತ ಸಂಸಾರ ಜೀವನವನ್ನು ನಡೆಸಿದ ಆಚಾರ್ಯರು ಸಾಂಸಾರಿಕ ಸುಖ ಭೋಗಗಳನ್ನು ತ್ಯಜಿಸಿದರು. ಅತ್ಯಂತ ಕಠಿಣ ತಮವಾದ ಸಾಮಾನ್ಯರಿಗೆ ಕಲ್ಪಿಸಲೂ ಅಶಕ್ಯವಾದ 'ಅಸಿಪತ್ರವೃತ'ವನ್ನು ಕೈಗೊಂಡರು. ಅಸಿ ಎಂದರೆ ಖಡ್ಗ ಅಸಿಪತ್ರ ವೃತವೆಂದರೆ ಪತಿ ಪತ್ನಿ ಜೊತೆಯಲ್ಲಿ ವಾಸ ಮಾಡಿಕೊಂಡಿದ್ದರೂ ಪರಸ್ಪರರ ಆಕರ್ಷಣೆಯಿಂದ ದೂರವಾಗಿರುವುದು ಒಂದು ವೇಳೆ ಮನಸ್ಸು ವಿಕಾರಗೊಂಡರೆ ಅದೇ ಖಡ್ಗದಿಂದ ಪ್ರಾಣ ತೆಗೆದುಕೊಳ್ಳುವ ಸಂಕಲ್ಪ ಮಾಡಿ ಸ್ವೀಕರಿಸಿದ ವೃತಕ್ಕೆ ಅಸಿಪತ್ರ ವೃತವೆಂದು ಹೆಸರು. ಮನಸ್ಸನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳದೇ ಇವರುವವರಿಗೆ ಊಹಿಸಲೂ ಅಸಾಧ್ಯವಾದ ಚರಿತ್ರೆಯಲ್ಲೇ ದುರ್ಲಭವಾದ ಇಂತಹ ವೃತವನ್ನು ಆಚರಿಸಿದ ಆಚಾರ್ಯರು ''ಅರಣ್ಯಕಾಚಾರ್ಯರು'' ಅಡವಿ ಆಚಾರ್ಯರೆಂದೇ ಪ್ರಸಿದ್ಧರಾದರು. ಅವರ ಮುಂದಿನ ವಂಶವೆಲ್ಲ ಅಡವಿ ವಂಶವೆಂದೇ ಪ್ರಸಿದ್ಧವಾಯಿತು.

## ವನದಲ್ಲಿ ವನಾರ್ಯರ ದಿನಚರಿ

ವನದಲ್ಲಿ ವಾಸವಾಗಿದ್ದರೂ ವನಾರ್ಯರ ದಿನಚರಿ ಬದಲಾಗಲಿಲ್ಲ. ತಾವೇ ತಮ್ಮ ಶಿಷ್ಯರಿಗೆ ಉಪದೇಶಿಸಿದಂತೆ ಹಾಗೂ ಅಸನ್ನಿಹಿತ ಶಿಷ್ಯರಿಗೆ ಉಪದೇಶ ಪತ್ರವನ್ನು ಬರೆದು ಕಳಿಸಿದಂತೆ ಮುಮುಕ್ಷವಾದವನು ಆಚರಿಸಬೇಕಾದ ದಿನಚರಿಯನ್ನು ಸ್ವತಃ ತಾವೇ ಆಚರಿಸುತ್ತಿದ್ದರು. ಉತ್ತರರಾತ್ರಿಯಲ್ಲಿ ಆರು ಘಳಿಗೆ ರಾತ್ರಿ ಇರುವಾಗ ನಿದ್ರೆಯಿಂದ ಎಚ್ಚೆತ್ತು ಉಪದಿಷ್ಟ ಮಾರ್ಗದಿಂದ ಹರಿಯಧ್ಯಾನ ನಂತರ ನದಿಗೆ ನಡೆದು ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು ನದಿಗೆ ಸ್ನಾನಕ್ಕಾಗಿ ನಡೆದರು. ''**ಯತೀನಾಂ ಸ್ನಾನ ಕಾಲೋಯಂ ಗಂಗಾಂಭ ಸದೃಶಂ ಜಲಂ**'' ಎಂದು ಶ್ರೀಮದಾಚಾರ್ಯರು ಸದಾಚಾರ ಸ್ಮೃತಿಯಲ್ಲಿ ತಿಳಿಸಿದಂತೆ ಬ್ರಾಹ್ಮೀ ಮುಹೂರ್ತದಲ್ಲಿ ಸ್ನಾನ ಮಾಡಿ. ಮಲಪ್ರಭಾ ನದಿಯಲ್ಲಿ ಜನಾರ್ದನನ್ನು ಸ್ಮರಿಸಿ ನದ್ಯಭಿಮಾನೀ ದೇವತೆಗೆ ಅರ್ಘ್ಯನೀಡಿ, ಸ್ನಾನಾಂಗ ತರ್ಪಣ ನೀಡಿದರು. ಸಾಂಗವಾಗಿ ತಾವು ಜಪಿಸಿದ ಮಂತ್ರಗಳನ್ನೆಲ್ಲ ಜಪಿಸಿದರು.

ನಂತರ ನೀರಿನಿಂದ ಮೇಲೆ ಬಂದು ತಮ್ಮ ಜಟೆಯನ್ನು (ವಾನಪ್ರಸ್ಥರು ಕ್ಷೌರ ಮಾಡಿಸುವಂತಿಲ್ಲ. ಆದುದರಿಂದ ಅವರು ಜಟಾಧಾರಿಗಳಾಗಿರುತ್ತಾರೆ) ವರಿಸದೇ ಹಾಗೇ ಸುತ್ತಿಕೊಂಡು, ಪದ್ಮಾಸನದಲ್ಲಿ ಕುಳಿತುಕೊಂಡು ತಾವು ಬಾಲ್ಯ ಶ್ರೀಮದಾಚಾರ್ಯರ ಪಾವನತಮ ಚರಿತೆಯನ್ನು ತಿಳಿಸುವ ಒಂದು ಸಾವಿರದ ಎಂಟು ಶ್ಲೋಕಗಳಿಂದ ಕೂಡಿದ ಸುಮಧ್ವ ವಿಜಯವನ್ನು ಸಂಪೂರ್ಣವಾಗಿ ಪಾರಾಯಣ ಮಾಡುತ್ತಿದ್ದರು. "**ಜಡೆಯಲಿದ್ದ ನೀರು ತೆಗೆಯದೆ ಆ ಜಡೆಯ ಸುತ್ತಿದನು ವರಿಸದೆ । ಜಡಿಯಿಂದ ಉದುರುತ ಹನಿಗಳು ಬಹು ದೃಢವಾಗಿ ಧರಿಸಿದ ಮೈಯೊಳು । ಪ್ರೇಮದಿ ಹರಿಯಲ್ಲಿ ಮನಹಾಕಿ । ನಿಷ್ಕಾಮದಿ ಪದ್ಮಾಸನ ಹಾಕಿ । ಶ್ರೀಮಧ್ವವಿಜಯ ಗ್ರಂಥದಲ್ಲಿ ನಿತ್ಯ ನೇಮದಿ ಪಠಿಸಿದ ತಡವಿಲ್ಲ**" ಆಚಾರ್ಯರ ಸುಮಧ್ವ ವಿಜಯದ ಪಾರಾಯಣ ಮುಗಿಯುವ ವೇಳೆಗೆ ಸರಿಯಾಗಿ ಸೂರ್ಯೋದಯವಾಗುತ್ತಿತ್ತು. ಸುಮಧ್ವ ವಿಜಯದ ನಿತ್ಯ ಪಾರಾಯಣವು ಅವರ ಜೀವನದ ನಿತ್ಯ ವ್ರತಗಳಲ್ಲೊಂದಾಗಿತ್ತು. (ಸುಮಧ್ವವಿಜಯದ ಹದಿನಾರು ಸರ್ಗಗಳ ಪ್ರಮೇಯಗಳನ್ನು ಹಾಗೂ ಒಂದೊಂದು ಸ್ವರ್ಗದ ಫಲವನ್ನು ಪ್ರತ್ಯೇಕವಾಗಿ ತಿಳಿಸುವ "ಶ್ರೀಮತ್ಸುಮಧ್ವವಿಜಯ ಪ್ರಮೇಯ ಫಲ ಮಾಲಿಕಾ" ಎಂಬ ಸುಂದರ ಇಪ್ಪತ್ತೆರಡು ಶ್ಲೋಕಗಳ ಕೃತಿಯೊಂದನ್ನು ವಿಷ್ಣುತೀರ್ಥರು ರಚಿಸಿದ್ದಾರೆ. ಇದು ಅವರ ಸನ್ಯಾಸಾನರತರದ ಕೃತಿ ಎಂದು ಅದರಿಂದಲೇ ತಿಳಿದು ಬರುತ್ತದೆ). ದಿನಕರನ ದರ್ಶನವಾಗುತ್ತಿದ್ದಂತೆಯೇ ತಮ್ಮ ನಿತ್ಯ ಕರ್ಮಗಳನ್ನು ತೀರಿಸಿಕೊಂಡ ಶಿಷ್ಯರು ಪಾಠಕ್ಕೆ ಬಂದು ಕುಳಿತುಕೊಳ್ಳುತ್ತಿದ್ದರು. ಸೂರ್ಯೋದಯಕ್ಕೆ ಆರಂಭವಾದ ಸಚ್ಛಾಸ್ತ್ರದ ಪಾಠವು ಸೂರ್ಯನು ನಡು ನೆತ್ತಿಯ ಮೇಲೆ ಬರುವವರೆಗೂ ಮುಂದುವರೆಯುತ್ತಿತ್ತು. ಮಧ್ಯಾಹ್ನದ ನಂತರ ಆಚಾರ್ಯರು 'ಮಧುಕರಿ' ಬೇಡಿ ಭಿಕ್ಷಾನ್ನವನ್ನು ತರಲು ಹೋಗುತ್ತಿದ್ದರು. ಮುನವಳ್ಳಿ ಗ್ರಾಮದಲ್ಲಿದ್ದ ಎಲ್ಲ ಸದ್ಗ್ರಹಸ್ಥರೂ ಆಚಾರ್ಯರು ಬರುವಿಕೆಯನ್ನೇ ಕಾಯುತ್ತಿದ್ದರು. ಆಚಾರ್ಯರು ಅವರಿಗೆಲ್ಲ ಅಮೃತೋಪದೇಶ ನೀಡಿದ್ದರು. ದೇವತೆಗಳಿಂದಲೂ ಪ್ರಾರ್ಥ್ಯವಾದ ಕಲಿಯುಗದಲ್ಲಿ ಶ್ರೇಷ್ಠವಾದ ದ್ವಿಜಕುಲದಲ್ಲಿ ಹುಟ್ಟಿ ಬರಬೇಕಾದರೆ ಬಹಳ ದುರ್ಲಭವಾಗಿದೆ ಇಂತಹ ದುರ್ಲಭವಾದ ಬ್ರಾಹ್ಮಣ ದೇಹ ದೊರೆತಿರಲು ಸುಖತೀರ್ಥರ ಶಾಸ್ತ್ರಗಳ ಅಧ್ಯಯನವೇ ಮುಖ್ಯ ಕಾರ್ಯ. ಯಾರು ಯಾವುದನ್ನು ಮಾಡಬೇಕೆಂದು ಭಗವಂತನ ಆಜ್ಞೆಯೋ ಅದನ್ನು ಬಿಟ್ಟು ಬೇರೆ ಸಾವಿರ ಕೆಲಸಗಳನ್ನು ಮಾಡಿದರೂ ಏನೂ ಮಾಡದಂತೆಯೇ ಸರಿ. ಭಗವಂತನ ಆಜ್ಞೆ ಮೀರಿದಂತೆಯೇ ಸರಿ ಅದಕ್ಕಾಗಿಯೇ ಟೀಕಾರಾಯರು ಈ ಕಾರ್ಯ ನಡೆಸಲು ನನ್ನನ್ನು ಆಜ್ಞಾಪಿಸಿ ಈ

ಕ್ಷೇತ್ರದಲ್ಲಿರಲು ಪ್ರೇರೇಪಿಸಿ ಕಳುಹಿಸಿದ್ದಾರೆ. ಅದಕ್ಕಾಗಿಯೇ ಏಕಾಂತ ಸ್ಥಳದಲ್ಲಿ ಏಕ ಚಿತ್ತದಿಂದ ನಿರಂತರ ಕಾರ್ಯನಿರತನಾಗಿರಬೇಕು, ಅದಕ್ಕಾಗಿ ನನ್ನನ್ನು ಆಶ್ರಯಿಸಿದ ಈ ಶಿಷ್ಯರಿಗೆಲ್ಲ ನಿತ್ಯ ಅನ್ನ ನೀಡಿ ವಿದ್ಯೋಪದೇಶ ನೀಡಬೇಕು. ಅದಕ್ಕಾಗಿ ಧನಾರ್ಜನೆ ಯನ್ನು ಮಾಡಬೇಕು, ಧನರ್ಜನೆಗಾಗಿ ಧನಮದದಿಂದ ಗರ್ವಿಷ್ಟರಾದವರನ್ನು ಸ್ತುತಿಸಿ ಅವರನ್ನು ಅನುಸರಿಸಿ ಧನಗಳಿಸಲು ಅದರಿಂದ ದುಃಖವೇ ಹೆಚ್ಚಾದಿತು ಪ್ರಾಣ ರಕ್ಷಣೆಗಾಗಿ ಬೇಕಾದಷ್ಟನ್ನು ಮಾತ್ರ ಸ್ವೀಕರಿಸಬೇಕು. ''**ಯಃಪ್ರಾಣ ವೃತ್ಯಾ ಪರಿತುಷ್ಟ ಆತ್ಮವಾನ್ ಸಿದ್ಧ್ಯತ್ಯದೂರಾನ್ನ ತಥೇಂದ್ರಿಯ ಪ್ರಿಯಃ**'' ಅದಕ್ಕಾಗಿ ಪ್ರಾಣ ರಕ್ಷಣೆಗಾಗಿ ಬ್ರಹ್ಮದೇವರು ನಾಲ್ಕು ವೃತ್ತಿಗಳನ್ನು ಮಾಡಿ ಹಂಚಿಕೆ ಮಾಡಿದರು. ಆ ನಾಲ್ಕು ವೃತ್ತಿಗಳು ಯಾವವೆಂದರೆ 1) ವಾರ್ತಾ, 2) ಅಸಂಚಯ, 3) ಶಾಲೀನ, 4) ಶಿಲೋಂಛ.

ವಾರ್ತಾ :- ಯಾಯಿ ವಾರವೆಂಬ ಹೆಸರುಳ್ಳ ಭಿಕ್ಷಾಚರ್ಯೆಯೇ ವಾರ್ತೆ.

ಅಸಂಚಯ :- ಆದಿವಸ ಸಂಪಾದಿಸಿದ ಅಕ್ಕಿಯೆ ಮೊದಲಾದ ಪದಾರ್ಥಗಳನ್ನು ಅದೇ ದಿವಸ ಉಪಯೋಗಿಸಿ ನಾಳಗೆಂದು ಸಂಗ್ರಹ ಮಾಡದಿರುವುದೇ ಅಸಂಚಯ.

ಶಾಲೀನ :- ತನ್ನ ಜೀವನಕ್ಕಾಗಿ ಕಣಜ ಅಥವಾ ದೊಡ್ಡ ಪಾತ್ರೆಗಳಲ್ಲಿ ಒಂದು ವರುಷಕ್ಕೆ ಆಗುವಷ್ಟು ಧಾನ್ಯಗಳನ್ನು ಸಂಗ್ರಹಿಸಿ ಇಡುವುದು ಶಾಲೀನ.

ಶಿಲೋಂಛ :- ಧಾನ್ಯಗಳನ್ನು ಬೆಳೆದ ಹೊಲದಲ್ಲಿ ಅದರ ಯಜಮಾನನು ಧಾನ್ಯದ ರಾಶಿಯನ್ನು ಮಾಡಿ ತೆಗೆದುಕೊಂಡು ಹೋದ ನಂತರ ಅವನು ಬಿಟ್ಟು ಹೋದ ಧಾನ್ಯವನ್ನು ತೆಗೆದುಕೊಂಡು ಒಂದು ಜೀವನ ನಡೆಸುವುದು ಶಿಲೋಂಛ.

ಇವುಗಳಲ್ಲಿ ಯಾವುದಾದರೊಂದು ವೃತ್ತಿಯಿಂದ ಪರಿತುಷ್ಟವಾದ ಮನಸ್ಸುಳ್ಳವನಾಗಿ ಪಾಪ ಅಜನಕವಾದ ಧರ್ಮಗಳನ್ನು ಸೇವಿಸುತ್ತ ನನ್ನಲ್ಲೇ ಮನಸ್ಸುಳ್ಳವನಾಗಿ ಉದರ ಪೂರ್ತಿಗೆ ಅವಶ್ಯಕವಾದದ್ದಕ್ಕಿಂತಲೂ ಹೆಚ್ಚಿನ ವಿಷಯಗಳಲ್ಲಿ ಅನಾಸಕ್ತನಾಗಿ ನನ್ನನ್ನು ಭಜಿಸಿದವನು ಮನೆಯಲ್ಲೇ ಇದ್ದರೂ ಶಾಂತಿಯನ್ನು ಅಂದರೆ ಸಂಸಾರ ನಿವೃತ್ತಿ ರೂಪವಾದ ಮೋಕ್ಷವನ್ನು ಹೊಂದುತ್ತಾನೆ. ಮಧುಕರ ವೃತ್ತಿ ಎಂದರೆ ಜೇನು ಹುಳುವಿನಂತೆ ಎಲ್ಲ ಕಡೆಗೆ ಭಿಕ್ಷೆ ಬೇಡಿ ಉದರ ಪೋಷಣೆಗೆ ಬೇಕಾದಷ್ಟನ್ನೇ ಸ್ವೀಕರಿಸುವುದು. ಈ ಮಧುಕರ ವೃತ್ತಿಯೇ ವಾರ್ತಾ ಎನಿಸಿಕೊಳ್ಳುತ್ತದೆ. ''**ಅಡಗಿಯ ಶ್ರಮ ಇದಕಿಲ್ಲ । ಕೂಡುಕೊಂಬುವ ಭಯವಿಲ್ಲ । ಗಿಡಕ ಹೋಗಿ ಯಲಿ ಕಡದು ತಂದು । ಮಡಿ ಹಚ್ಚುವ ಭಯವಿಲ್ಲ ।** ವಾರ್ತಾ ವೃತ್ತಿಯಿಂದ ಪರಿತುಷ್ಟ ಮನಸ್ಸುಳ್ಳವನಿಗೆ ಯಾವುದೇ ಐಹಕ ಪಾರತ್ರಿಕ ದುಃಖ ಜನಕವಾದ ಪಾಪಗಳ ಸಂಗ್ರಹವಾಗುವದಿಲ್ಲ.

ಹರಿಗುರುಗಳು ನಮಗೆ ಇದನ್ನೇ ಅನುಸರಿಸಲು ಪ್ರೇರೆಪಿಸಿದುದರಿಂದ ನಾವು ಮಧುಕರೀ ವೃತ್ತಿಯಿಂದ ಜೀವನ ನಿರ್ವಹಣೆ ಮಾಡುತ್ತ ಟೀಕಾಚಾರ್ಯರ ಸೇವೆಯನ್ನು ಮಾಡುತ್ತಿದ್ದೇವೆ. ನಿತ್ಯದಲ್ಲಿ ನಿಮ್ಮ ಭೋಜನದ ಸಮಯಕ್ಕೆ ಉತ್ತಮ ಮಧುಕರೀ ಭಿಕ್ಷೆಯನ್ನು ನೀಡಿರಿ. ''**ರಾಶಿ ಪುಣ್ಯ ಬಾಹೋದು ಶ್ರೀಶ ಅನಂತಾದ್ರೀಶನ ಪ್ರೀತಿ ವಿಶೇಷ ಮತ್ತೆ ಆಗೋದು**'' ಎಂದು ಹೇಳಿ ನಿತ್ಯದಲಿ ಭಿಕ್ಷೆಗೆ ಹೋಗುತ್ತಿದ್ದರು. ಆಚಾರ್ಯರ ಬಗೆಗೆ ವಿಶೇಷ ಗೌರವ ಹೊಂದಿದ್ದ ಆ ಎಲ್ಲ ಸದ್ಗ್ರಹಸ್ಥರು ಆಚಾರ್ಯರಿಗೆ ಭಿಕ್ಷೆ ನೀಡಲು ಕಾಯ್ದುಕೊಂಡಿರುತ್ತಿದ್ದರು. ತಾವು ಭಿಕ್ಷೆಗೆ ಹೋಗುವುದಕ್ಕೆ ಕಾಯ್ದುಕೊಂಡಿರುತ್ತಿದ್ದ ಗೃಹಸ್ಥರಿಗೆ ಸಮಯದ ಅನಾನುಕೂಲತೆ ಆಗಬಾರದೆಂದು ಜಯತೀರ್ಥಾಚಾರ್ಯರು ಅವರಿಗೆಲ್ಲ ಹೇಳಿದರು. ನಾವು ವನದಲ್ಲಿ ವಾಸ ಮಾಡುವವರು ವಾನಪ್ರಸ್ಥರು ನಿರಂತರ ಪಾಠ ಪ್ರವಚನಗಳಲ್ಲಿ, ಭಗವಂತನ ಧ್ಯಾನದಲ್ಲಿ ರತರಾದವರು ನಮ್ಮ ಸಮಯವೆಲ್ಲ ಪಾಠ ಪ್ರವಚನ ರೂಪವಾದ ತಪಸ್ಸಿಗೆ ಮೀಸಲಾಗಿಸಿದ್ದೇವೆ. ಅನೇಕ ಲೌಕಿಕ ಕಾರ್ಯಗಳನ್ನು ಮಾಡಬೇಕಾದ ತಾವೆಲ್ಲ ನಮ್ಮನ್ನು ಕಾಯ್ದು ಕುಳಿತು ಅನಾನುಕೂಲತೆ ಮಾಡಿಕೊಳ್ಳಬೇಡಿ, ಪ್ರತಿನಿತ್ಯ ದೇವಪೂಜೆ, ವೈಶ್ವದೇವ, ಬಲಿಹರಣ, ಹಸ್ತೋದಕ ಇತ್ಯಾದಿಗಳನ್ನು ನೇರವೇರಿಸಿ ನಮಗೋಸ್ಕರ ಒಂದು ಬಿದಿರು ಬುಟ್ಟಿಯಲ್ಲಿ ಭಿಕ್ಷೆಯನ್ನು ಮುಚ್ಚಿಟ್ಟು ನಂತರ ನಿಮ್ಮ ದೈನದಿಂದ ಕಾರ್ಯಗಳನ್ನು ಸಾಗಿಸಿರಿ. ನಾವು ಬಂದು ಅದನ್ನು ತೆಗೆದುಕೊಂಡು ಹೋಗಿ ಸ್ವೀಕಾರ ಮಾಡುತ್ತೇವೆ ಎಂದು ಹೇಳಿದರು. ''**ಉಪ್ಪು ಮೊದಲು ಮಾಡಿ ತುಪ್ಪವು ಕಡಿಯಾಗಿ ವಪ್ಪಾಗಿ ಬಡಿಸಿದರು । ತಪ್ಪದೆ ನಿತ್ಯ ಕೃಷ್ಣಾರ್ಪಣ ಪೂರ್ವಕ ಅರ್ಪಣ ಮಾಡಿದರು । ಅದರ ಮ್ಯಾಲೆ ದೊಡ್ಡ ಬಿದಿರ ಬುಟ್ಟಿಯ ಮುಚ್ಚಿ ಅದರ ಮೇಲ್ಕಲ್ಲೇರುತಾ । ಸಾಧಿಸಿ ಜಯ ಶಿಷ್ಯರಾದವರನ ಬಹು ಮೋಹದಿ ಸ್ಮರಿಸಿದರು.** ಭಿಕ್ಷೆಯನ್ನು ಎತ್ತಿಟ್ಟು ಜಯತೀರ್ಥಾಚಾರ್ಯರನ್ನು ನಿರೀಕ್ಷಿಸುತ್ತಿದ್ದರು. ಜಯತೀರ್ಥಾಚಾರ್ಯರು ಭಿಕ್ಷೆಗೆ ಬರುತ್ತಿದ್ದ ಹಾಗೆಯೇ ಗೌರವದಿಂದ ನಮಸ್ಕರಿಸಿ ಅವರನ್ನು ಒಳಗೆ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿ ಅವರು ತೆಗೆದಿರಿಸಿದ ಭಿಕ್ಷೆಯನ್ನು ಸ್ವೀಕರಿಸಿ ಹೊರಡುತ್ತಿದ್ದಂತೆಯೇ ತಾವು ಕೈಯಲ್ಲಿ ಒಂದು ದಂಡವನ್ನು ತೆಗೆದುಕೊಂಡು ದಾರಿಯಲ್ಲಿ ಯಾವುದೇ ಪ್ರಾಣಿಗಳು ಅವರನ್ನು ಮುಟ್ಟದಂತೆ ಹಿಂದೆ ಮುಂದೆ ರಕ್ಷಣೆ ಮಾಡುತ್ತ ಅವರನ್ನು ಪರ್ಣ ಶಾಲೆಯವರೆಗೆ ಬಿಟ್ಟು ಬರುತ್ತಿದ್ದರು. ಹೀಗೆ ಜಯತೀರ್ಥಾಚಾರ್ಯರಿಗೆ ಭಿಕ್ಷೆ ನೀಡಿದವರ ಹಾಗೂ ಅವರಿಂದ ಉಪದಿಷ್ಟರಾಗಿ ಅವರ ಸೇವೆ ಮಾಡಿದ ಜನಗಳ ಭಾಷ್ಯವನ್ನು ಏನೆಂದು ವರ್ಣಿಸೋಣ ''ದಾನಂಧ್ರುವಂ ಫಲತಿ ಪಾತ್ರ ಗುಣಾನು ಕೂಲ್ಯಾತ್'' ಎಂದಂತೆ ಅವರಿಗೆ ಭಗವಂತನ

ವಿಶೇಷ ಅನುಗ್ರಹವಾಯಿತು ಎಂದು ಪ್ರತ್ಯೇಕ ಹೇಳಬೇಕೆ ? ಮಂದಭಾಗ್ಯರಿಗೆ ದೊರಕದಿವರ ಸೇವಾ ಎಂಬಂತೆ ಅವರನ್ನೆ ಸೇವಿಸಿ ಅನುಗ್ರಹ ಪಡೆದವರೇ ಪರಮ ಭಾಗ್ಯವಂತರು. ಹೀಗೆ ತಂದ ಭಿಕ್ಷೆಯನ್ನು ಪವಿತ್ರವಾದ ಉದಕದಿಂದ ಶುದ್ಧೀಕರಿಸಿಕೊಂಡು ಕೇವಲ ದೇಹ ಪೋಷಣೆಗಾಗಿ ಹರಿಸ್ಮರಣೆ ಮಾಡುತ್ತ ಅವರೇ ಭೋಜನ ಪ್ರಕರಣದಲ್ಲಿ ತಿಳಿಸಿದ ಹಾಗೆ ವೈಶ್ವಾನರ ಯಜ್ಞವೆಂದು ಸೇವಿಸುತ್ತ ವಿಷ್ಣು ಕರ್ತೃತ್ವ ಕಾರಯಿತೃತ್ವಾನುಸಂಧಾನ ಪೂರ್ವಕವಾಗಿ ಯಜ್ಞೋಪಾದಿಯಲ್ಲಿ ಭೋಜನ ನಡೆಸುತ್ತಿದ್ದರು. ಭೋಜನದ ನಂತರ ಎರಡು ಘಳಿಗೆ ನಿರಂತರವಾಗಿ ಸಚ್ಛಾಸ್ತ್ರಗಳ ಪ್ರವಚನ ಮಾಡುತ್ತಿದ್ದರು. ಸೂರ್ಯಾಸ್ತದ ಸಮಯಕ್ಕೆ ಎರಡು ಘಳಿಗೆ, ಸಾಯಂ ಪೂಜೆ ಇತ್ಯಾದಿಗಳನ್ನು ಮುಗಿಸಿ ನಂತರ ಎಂಟು ಗಳಿಗೆ ಕಾಲ ಗ್ರಂಥಾವಲೋಕನ ಹಾಗೂ ಗ್ರಂಥ ನಿರ್ಮಾಣಕ್ಕಾಗಿ ಮೀಸಲಿಡುತ್ತಿದ್ದರು. ನಂತರ ತಾವೇ ಬರೆದ ಸರ್ವ ಸಮರ್ಪಣ ಗದ್ಯದಲ್ಲಿ ತಿಳಿಸಿದಂತೆ ಆ ದಿನ ಬೆಳಗಿನಿಂದ ರಾತ್ರಿಯವರೆಗಿನ ತಮ್ಮ ಸಮಸ್ತ ದೈಹಿಕ, ವಾಚಿಕ, ಮಾನಸಿಕ ಕರ್ಮಗಳನ್ನು ತಮ್ಮ ಬಿಂಬನಿಗೆ ಸಮರ್ಪಿಸಿ ನಂತರ ಪ್ರಾಜ್ಞನಾಮಕ ಭಗವಂತನ ಆಲಿಂಗನ ರೂಪವಾದ ನಿದ್ರೆಗೆ ಶರಣಾಗುತ್ತಿದ್ದರು.

## ದಿವ್ಯ ಗ್ರಂಥದಾತರು

ಈ ರೀತಿಯಾಗಿ ಹನ್ನೆರಡು ವರ್ಷಗಳವರೆಗೆ ವಾನಪ್ರಸ್ಥಾಶ್ರಮವನ್ನು ಆಚರಿಸಿ ಅನಿತರ ಸಾಧಾರಣ ವೈರಾಗ್ಯದಿಂದ, ಅಡವೀ ಆಚಾರ್ಯರು, ಅರಣ್ಯಕಾಚಾರ್ಯರು, ಅವಧೂತ ಶಿರೋಮಣಿಗಳು ಎಂದು ಪ್ರಖ್ಯಾತರಾದ ಜಯತೀರ್ಥಾಚಾರ್ಯರು ತಮ್ಮ ವಾನಪ್ರಸ್ಥದ ಅವಧಿಯಲ್ಲಿಯೇ ಅನೇಕ ಗ್ರಂಥಗಳನ್ನು ನಿರ್ಮಾಣ ಮಾಡಿದ್ದಾರೆ. ಇವರ ಗ್ರಂಥಗಳು ಇಷ್ಟೇ ಎಂದು ನಿಖರವಾಗಿ ತಿಳಿದು ಬಂದಿಲ್ಲ. ಇಲ್ಲಿಯವರೆಗೆ ಉಪಲಬ್ಧವಾದ ಅವರ ಕೃತಿಗಳು ಸುಮಾರು ಹತ್ತೊಂಬತ್ತು ಇದರಲ್ಲಿ ಸುಮಧ್ವ ವಿಜಯ, ಪ್ರಮೇಯ ಫಲಮಾಲಿಕಾ ಮತ್ತು ರಮಾಸ್ತೋತ್ರ ಎರಡನ್ನು ಬಿಟ್ಟರೆ ಉಳಿದೆಲ್ಲ ಕೃತಿಗಳು ಪ್ರಾಯಃ ಮುನಿವಳ್ಳಿಯಲ್ಲಿಯೇ (ಸನ್ಯಾಸಕ್ಕೆ ಪೂರ್ವದಲ್ಲಿಯೇ) ರಚಿತವಾದವುಗಳು ಇವುಗಳಲ್ಲಿ ಸ್ವತಂತ್ರ ಗ್ರಂಥಗಳು, ಟಿಪ್ಪಣೀ ಗ್ರಂಥಗಳು, ಪ್ರಮೇಯ ಸಂಗ್ರಹ, ಸ್ತೋತ್ರಗಳು, ಪತ್ರ ಸಾಹಿತ್ಯ ಇತ್ಯಾದಿಯಾಗಿ ಬಹಳ ವಿಸ್ತೃತವಾಗಿದೆ ಇವರ ಗ್ರಂಥ ಪ್ರಪಂಚ. ಇವುಗಳನ್ನು ವಿವರಣೆ ಸಹಿತವಾಗಿ ಪ್ರತ್ಯೇಕವಾಗಿ ಪರಿಶಿಷ್ಟದಲ್ಲಿ ಮುದ್ರಿಸಿದೆ.

# ಬೈದವರೆನ್ನ ಬಂಧುಗಳೆಂಬೆ

ಜಯತೀರ್ಥಾಚಾರ್ಯರ ಕೀರ್ತಿ ದಿನದಿನಕ್ಕೆ ಬೆಳೆಯ ತೊಡಗಿತು. ಇವರನ್ನು ಸೇವಿಸಿ ಆನಂದಿಸುವವರಂತೆ ಇವರನ್ನು ದೂಷಿಸುವ ಮತ್ಸರಿಗಳ ಮಾತ್ಸರ್ಯವೂ ಬೆಳೆಯಿತು. ಗುಣ ಮತ್ಸರಿಗಳು ಎಲ್ಲ ಕಾಲದಲ್ಲಿಯೂ ಇರುವವರೇ ಅಂತಹ ಮಾತ್ಸರ್ಯಯುಕ್ತರಾದ ಕೆಲವು ಕುಹಕಿಗಳು ಇವರನು ನಿಂದಿಸುತ್ತಿದ್ದರು. ಇವರ ಶಿಷ್ಯ ಸಂಪತ್ತನ್ನು ಕಂಡು ಕರುಬಿದ ಕೆಲವು ಅಸೂಯಾಗ್ರಸ್ತರು ಇವರ ಶಿಷ್ಯರನ್ನು ನಿಂದಿಸಿದರು. ಇವರು ಮಧ್ಯಾಹ್ನದವರೆಗೆ ಶ್ರವಣ ಮಾಡಿ ಪಂಡಿತರಾದರು, ಇವರ ಗುರುಗಳು ಎರಡು ಘಳಿಗೆ ಮಾತ್ರ ಶ್ರವಣದಿಂದ ವಿದ್ವಾಂಸರು, ಅವರ ಗುರುಗಳಂತೂ ಅಧ್ಯಯನವೇ ಮಾಡದೇ ಚಿಟಿಕೆ ಒಳಗೆ ಪಂಡಿತರಾದರು, ಎಷ್ಟೋ ದಿವಸಗಳವರೆಗೆ ವಾಕ್ಯಾರ್ಥ ವಿಚಾರಗಳನ್ನು ಮಾಡಿದರೂ ದೊರಕದ ವಿದ್ಯೆಯು ಇವರಿಗೆ ಸುಮ್ಮನೆ ಶ್ರವಣ ಮಾತ್ರದಿಂದ ಹೇಗೆ ದೊರಕಲು ಸಾಧ್ಯ ಎಂಬಿತ್ಯಾದಿಯಾಗಿ ದೂಷಣೆ ಮಾಡಿದರು. ಈ ರೀತಿಯಾಗಿ ಅನೇಕರು ನಿಂದಿಸುತ್ತಾರೆಂಬುದನ್ನು ತಿಳಿದುಕೂಡ ಜಯತೀರ್ಥಾಚಾರ್ಯರು ಏನೂ ಹೇಳಲಿಲ್ಲ. ಮುಗುಳ್ನಕ್ಕು ಸುಮ್ಮನಾದರು ಅಷ್ಟೆ. ಕೆಲವು ಶಿಷ್ಯರು ಬಂದು ಹೀಗೆ ನಿಂದಿಸುವದನ್ನು ಕೇಳಿ ಕೂಡ ಹೇಗೆ ಸುಮ್ಮನಿರುವಿರಿ ಎಂದು ಪ್ರಶ್ನೆಮಾಡಲು ಜಯಾಚಾರ್ಯರು ಮುಗುಳು ನಗುತ್ತ ಉತ್ತರಿಸಿದರು. ಅಯೋಗ್ಯರ ನಿಂದೆಯನ್ನು ಮನಸಿಗೆ ತಂದು ಕೊಳ್ಳಬೇಡಿರಿ. ಖಳರ ನಿಂದೆಯಿಂದ ನಮಗೇನು ಹಾನಿಯಿಲ್ಲ **''ಖಳರ ನಿಂದೆಯಲೇನು ಆಗುವುದು । ಮುಖ್ಯ ತಮಸಿನ ಒಳಗೆ ತಾವೇ । ಬೊಕ್ಕ ಬೋರಲ ಬಿದ್ದು ಅದರೊಳು ಸಿಕ್ಕು ಒದ್ದಾಡುವರು ಅಲ್ಲೆ ದಿಕ್ಕು ಕಾಣದಲೆ''** ಯೋಗ್ಯರು ಸಜ್ಜನರನ್ನು ನಿಂದಿಸಿದರೆ ಅದು ಅವರ ಪ್ರಾರಬ್ಧಕ್ಕನುಗುಣವಾಗಿ ಅವರ ಪೂರ್ವ ಜನ್ಮಾರ್ಜಿತ ಪುಣ್ಯ ನಾಶ ಮಾಡುತ್ತದೆ ಎಂದು ತಿಳಿದು ತಾನು ಮಾತ್ರ ಪ್ರತಿಕ್ರಯಿಸದೇ ಸುಮ್ಮನಿರಬೇಕು. ಉತ್ತರ ನೀಡಿದರೆ ಕಲಹ ಪರಂಪರೆ ಹೀಗೆ ಮುಂದುವರೆದೀತು. ಸ್ತುತಿ ನಿಂದೆಗಳಿಗೆ ಶಿಲಾಸದೃಶನಾಗಿ ನಿಂತು ತನ್ನ ಉದ್ಧಾರ ತಾನೇ ಮಾಡಿಕೊಂಡವನೇ ಜಾಣ ಎಂದು ಉಪದೇಶ ನೀಡಿದರು. ತಮ್ಮ ಗುರುಗಳ ಸ್ಥಿತ ಪ್ರಜ್ಞತೆಯನ್ನು ಕಂಡ ಅವರ ಶಿಷ್ಯರುಗಳು ತಮ್ಮ ಗುರುಗಳ ಉನ್ನತ ಚಿಂತನೆಯನ್ನು ಅರಿತು ಗುರು ಭಕ್ತಿ ಪರವಶರಾದರು. ಪ್ರಾಯಃ ಈ ಸಮಯದಲ್ಲೇ ಅವರಿಗೆ ಪತ್ನಿ ವಿಯೋಗವಾಯಿತು. ಗುರು ಪತ್ನಿಗಾಗಿ ದುಃಖಿಸುತ್ತಿದ್ದ ಶಿಷ್ಯರನ್ನು ಹಾಗೂ ತಾಯಿಗಾಗಿ ಶೋಕಿಸುತ್ತಿದ್ದ ಪುತ್ರ ಕೃಷ್ಣಾಚಾರ್ಯರನ್ನು ಆಚಾರ್ಯರೇ ಸಮಾಧಾನ ಪಡಿಸಿದರು. ತಾವೇ ಗ್ರಂಥಗಳಲ್ಲಿ ತಿಳಿಸಿದಂತೆ ಜೀವನ ಯಜ್ಞಕ್ಕೆ ಮರಣವೇ ಅವಭೃತ

ಸ್ನಾನ, ಹುಟ್ಟಿದವನಿಗೆ ಮರಣ ತಪ್ಪದು, ಅವಶ್ಯವಾಗಿ ನಡೆಯುವುದಕ್ಕೆ ಶೋಕಿಸಿ ಪ್ರಯೋಜನವಿಲ್ಲ. ಪುಣ್ಯ ಸಾಧನ ಮಾಡಿಕೊಂಡು ನಿರಂತರ ಭಗವತ್ಸ್ಮರಣೆಯನ್ನು ಮಾಡುತ್ತಾ ಮರಣಕ್ಕೆ ಸನ್ನದ್ಧರಾಗಿರಬೇಕು. ಹಳೆಯ ವಸ್ತ್ರವನ್ನು ತೆಗೆದು ಹೊಸ ವಸ್ತ್ರ ಧಾರಣೆ ಮಾಡಿದ ಹಾಗೆ, ಹಳೆಯ ಶರೀರವು ಕಳಚಿ ಮತ್ತೊಂದು ಶರೀರ ಪ್ರಾಪ್ತವಾಗುತ್ತದೆ. ಅದಕ್ಕಾಗಿ ಶೋಕಿಸಿ ಪ್ರಯೋಜನವಿಲ್ಲವೆಂದು ತಾವೇ ಮುಂದೆ ನಿಂತು ಮಗನ ಕೈಯಲ್ಲಿ ಎಲ್ಲ ಕ್ರಿಯೆಗಳನ್ನು ಯಥೋಚಿತವಾಗಿ ಮಾಡಿಸಿದರು. ಜಯತೀರ್ಥಾಚಾರ್ಯರಂತಹ ಅತ್ಯುನ್ನತ ಮಟ್ಟದ ಸಾಧಕರನ್ನು ಕೈಹಿಡಿದು ತುಂಬು ಯೌವನದ ವಯಸ್ಸಿನಲ್ಲಿಯೇ ಕಂಕುಳಲ್ಲಿ ಮಗುವನ್ನೆತ್ತಿಕೊಂಡು, ವೈರಾಗ್ಯ ಭಾವ ತಾಳಿದ ಪತಿಯನ್ನು ಹಿಂಬಾಲಿಸಿ, ರಾಮನನ್ನು ಹಿಂಬಾಲಿಸಿದ ಸೀತೆಯಂತೆ ಎಲ್ಲ ಸುಖ ಭೋಗಗಳನ್ನು ತೊರೆದು, ಪತಿಯೊಂದಿಗೆ ಅರಣ್ಯದಲ್ಲಿ ವಾಸಿಸಿ ಜಿತೇಂದ್ರಿಯಳಾಗಿ ವಾನಪ್ರಸ್ಥವನ್ನು ಪತಿಯೊಂದಿಗೆ ಆಚರಿಸಿ, ಪತ್ಯಂತರ್ಗತ ಪರಮಾತ್ಮನಿಗೆ ಸಮರ್ಪಿಸಿ ಭಗವಂತನ ಕೃಪೆಗೆ ಪಾತ್ರವಾದ ತುಂಬು ಜೀವನದ ತನ್ನ ಪ್ರೌಢ ವಯಸ್ಸಿನಲ್ಲಿಯೇ ಸುಮಂಗಲಿಯಾಗಿ ಜೀವನ ಯಾತ್ರೆಯನ್ನು ಮುಗಿಸಿದ ಆ ಮಹಾತಾಯಿಯು ಸ್ತ್ರೀ ಕುಲಕ್ಕೆ ಮಾದರಿಯಾಗಿದ್ದಳು.

## ಸನ್ಯಾಸದತ್ತ ಚಿತ್ತ

ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥಗಳೆಂಬ ಮೂರು ಆಶ್ರಮಗಳನ್ನು ಅತ್ಯಂತ ಕಟ್ಟುನಿಟ್ಟಾಗಿ ಆಚರಿಸಿ ಭಗವಂತನನ್ನು ಒಲಿಸಿದ್ದ ಆಚಾರ್ಯರಿಗೆ ಈಗ ಸುಮಾರು ನಲ್ವತ್ತರ ವಯೋಮಾನ. ವೈರಾಗ್ಯದ ತುತ್ತ ತುದಿಗೆ ಏರಿದ್ದ ಅವರಿಗೆ ಆಶ್ರಮಗಳಲ್ಲೇ ಉನ್ನತವಾದ ಸನ್ಯಾಸಾಶ್ರಮವನ್ನು ಪಡೆಯುವ ಬಯಕೆಯುಂಟಾಯಿತು. ''ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ'' ಎಂದು ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಹೇಳಿದಂತೆ ಎಲ್ಲಾ ಲೌಕಿಕ ಕಾಮನೆಗಳನ್ನು ತೊರೆದು, ನಿವೃತ್ತ ಕರ್ಮಗಳನ್ನು ಮಾತ್ರ ಆಚರಿಸುತ್ತ ವಿಷ್ಣು ಸರ್ವೋತ್ತಮತ್ವದ ಪ್ರತಿಪಾದಕ ಶಾಸ್ತ್ರಗಳ ಪಾಠ ಹೇಳುತ್ತ, ಒಂದರ್ಥದಲ್ಲಿ ಸನ್ಯಾಸಿಗಳಂತೆಯೇ ಬದುಕಿದ ಆಚಾರ್ಯರಿಗೆ ಸನ್ಯಾಸವೆಂಬ ಅಧಿಕೃತ ಮುದ್ರೆಯೊಂದು ಬೇಕಾಗಿತ್ತು. ಅದನ್ನು ಯೋಗ್ಯರಾದ ಗುರುಗಳಿಂದ ಪಡೆದುಕೊಂಡು ನಾಲ್ಕು ಆಶ್ರಮಗಳನ್ನು ಪರಿಪಾಲಿಸಿ ಕಂಸಾರಿಯ ಒಲುಮೆಗೆ ಪಾತ್ರನಾಗಿ ಸಂಸಾರವನ್ನು ದಾಟಬೇಕೆಂಬುದೇ ಅವರ ಹೆಬ್ಬಯಕೆಯಾಗಿತ್ತು. ತಮ್ಮದೆಲ್ಲವನ್ನು ದಾನ ಮಾಡಿದ ಅವರು ಸನ್ಯಾಸಕ್ಕೆ ನಿಜವಾಗಿ

ಅರ್ಹರಾಗಿದ್ದರು. ಮುನವಳ್ಳಿಯಲ್ಲಿ ತಮಗೆ ದಾನವಾಗಿ ಬಂದಿದ್ದ ಭೂಮಿಯನ್ನು ದಾನಮಾಡಿ ಅಲ್ಲಿಂದ ಹೊರಟರು. (ಆ ಭೂಮಿಯು ಬಂದ ಹಿನ್ನಲೆ ಹೀಗಿದೆಯೆಂದು ಗುರುಗೋವಿಂದ ವಿಠ್ಠಲದಾಸರು ತಮ್ಮ ಹರಿಭಕ್ತ ವಿಜಯದಲ್ಲಿ ಅಭಿಪ್ರಾಯ ಪಡುತ್ತಾರೆ.

ಒಮ್ಮೆ ಯಾವುದೋ ಯುದ್ಧದಲ್ಲಿ ಪಾಲ್ಗೊಳ್ಳಲು ಹೊರಟ ಮರಾಠಾ ಪೇಶ್ವೆ ಶಿಂಧೆ ಎಂಬುವನು ಜಯತೀರ್ಥರ ತಪಶ್ಶಕ್ತಿಯನ್ನು ಕೇಳಿ ಅವರಲ್ಲಿಗೆ ಬಂದು ಆಶೀರ್ವಾದ ಬೇಡಿದನಂತೆ, ಆವನು ಕೈಗೊಂಡಿದ್ದು ಧರ್ಮಯುದ್ಧವೆಂದರಿತ ಜಯಾರ್ಯರು ಜಯವಾಗಲಿ ಎಂದು ಹರಸಿದರು. ಆತನಿಗೆ ಯುದ್ಧದಲ್ಲಿ ಸುಲಭವಾಗಿ ಜಯವಾಯಿತು. ಆಚಾರ್ಯರ ಅನುಗ್ರಹವೇ ಈ ಜಯಕ್ಕೆ ಕಾರಣ ಎಂದರಿತ ಆ ಪೇಶ್ವೆಯು ಬಂದು ನಮಸ್ಕರಿಸಿ. ಕೃತಜ್ಞತೆ ಸಲ್ಲಿಸಿ ಅನೇಕ ಊರುಗಳನ್ನು ಭೂಮಿಗಳನ್ನುಧನ-ಕನಕಗಳನ್ನು ಕಾಣಿಕೆಯಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿದ. ತಮ್ಮದಾಗಿದ್ದ ಎಲ್ಲವನ್ನು ದಾನಮಾಡಿ ಭಿಕ್ಷಾ ವೃತ್ತಿಯಿಂದ ಜೀವಿಸುತ್ತ ಹರಿಯನ್ನು ಒಲಿಸಿ, ಅವನ ಪೂರ್ಣ ಕೃಪಾಪಾತ್ರರಾಗಿದ್ದ ಆಚಾರ್ಯರಿಗೆ ಈ ಲೌಕಿಕ ಸಂಪತ್ತಿನಿಂದ ಆಗಬೇಕಾದ್ದೇನು, ಅವರ ದೃಷ್ಟಿಯಲ್ಲಿ ಲೌಕಿಕ ಸಂಪತ್ತು ಸಂಪತ್ತಲ್ಲ. ಲೌಕಿಕ ವಿಪತ್ತು ವಿಪತ್ತಲ್ಲ. ಆಚಾರ್ಯರು ಎಲ್ಲವನ್ನು ವಿನಯದಿಂದಲೇ ನಿರಾಕರಿಸಿದರು. ಅದಕ್ಕೆ ಆತನು ಆಚಾರ್ಯರು ಪ್ರವಚನ ನಡೆಸುತ್ತಿದ್ದ ಸ್ಥಳ ಮತ್ತು ಸುತ್ತ ಮುತ್ತಲ ಎರಡು ಎಕರೆಯಷ್ಟು ಭೂಮಿಯನ್ನಾದರೂ ಸ್ವೀಕರಿಸಬೇಕೆಂದು ಆಗ್ರಹ ಪೂರ್ವಕವಾಗಿ ಪ್ರಾರ್ಥಿಸಲು ಒಪ್ಪಿಕೊಂಡು ಅನುಗ್ರಹ ಮಾಡಿದ್ದರು. ಈಗ ಅಲ್ಲಿಂದ ಹೊರಡುವಾಗ ಅದನ್ನು ಕೃಷ್ಣಾರ್ಪಣವೆಂದು ದಾನ ನೀಡಿ ಹೊರಟರು. ಒಟ್ಟು ಆಚಾರ್ಯರು ಮೂರು ಬಾರಿ ಸರ್ವಸ್ವ ದಾನ ಮಾಡಿದರೆಂದು ಪ್ರಸಿದ್ಧಿ (ಗುರವಃ ತ್ರಿವಾರಂ ಸರ್ವಸ್ವಂ ದದುರಿತಿ ಪ್ರಸಿದ್ಧಿಃ) ಆ ಭೂಮಿಯ ಅನೇಕ ದಿನಗಳವರೆಗೆ ರುದ್ರಾಪುರ ಎಂಬುವರ ವಶದಲ್ಲಿದ್ದು ಇತ್ತಿಚೇಗೆ ಬೇರೆಯವರಿಗೆ ಪರಭಾರೆಯಾಗಿದೆ. ಇದೀಗ ಮುನಿವಳ್ಳಿಯ ಅನೇಕ ಗಣ್ಯರು ಸೇರಿ ವಿಷ್ಣುತೀರ್ಥರ ಪ್ರವಚನದ ಕಟ್ಟೆ ಇದ್ದ ಜಾಗಕ್ಕೆ ರಕ್ಷಣಾ ಗೋಡೆಯನ್ನು ನಿರ್ಮಿಸಿ, ಬಾವಿಯನ್ನು ತೆಗಸಿ, ಪಾಕಶಾಲೆ ನಿರ್ಮಾಣ ಮಾಡಿದ್ದಾರೆ. ಪ್ರತಿ ವರುಷ ಜ್ಞಾನಸತ್ರ ಹಾಗೂ ವಿಷ್ಣುತೀರ್ಥರ ಆರಾಧನೆಯನ್ನು ಶ್ರದ್ಧಾಪೂರ್ವಕವಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ. ಹೀಗೆ ಸನ್ಯಾಸ ಬಯಸಿದ ಆಚಾರ್ಯರು ಉತ್ತಮ ಗುರುಗಳನ್ನು ಅರಸುತ್ತ ಹೊರಟರು).

# ಆಶ್ರಮ ಗುರುಗಳು

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನವಾದ ಹಂಸನಾಮಕ ಪರಂಪರೆಯ ಮೂಲ ಪೀಠವಾದ, ಶ್ರೀಮದುತ್ತರಾಧಿಮಠದ ಪೀಠಾಧೀಶ್ವರರಾಗಿದ್ದ ಶ್ರೀ 1008 ಶ್ರೀ ಸತ್ಯವರತೀರ್ಥ ಶ್ರೀಪಾದಂಗಳವರು ಕ್ರಿ.ಶ. 1794-1897 ಉತ್ತರಾದಿ ಮಠದ ಶಕಪುರುಷರೆಂದೆ ಖ್ಯಾತರಾದ ರಾತ್ರಿಯಲ್ಲಿ ಸೂರ್ಯನನ್ನು ತೋರಿಸಿದ ಕೀರ್ತಿಭಾಜನರಾದ, ಶ್ರೀ ಮಠದಲ್ಲಿ ಸುವರ್ಣ ಯುಗವನ್ನು ನಿರ್ಮಿಸಿದ 1008 ಶ್ರೀ ಸತ್ಯಬೋಧತೀರ್ಥ ಶ್ರೀಪಾದಂಗಳವರ ವಿದ್ಯಾ ಶಿಷ್ಯರು ಹಾಗೂ ಶಕ ಪುರುಷರೆಂದೇ ಖ್ಯಾತರಾದ ಅಷ್ಟೈಶ್ವರ್ಯ ಸಂಪನ್ನರಾಗಿದ್ದ ಉತ್ತರಾದಿ ಮಠಾಧೀಶರಾಗಿದ್ದ ಶ್ರೀ 1008 ಶ್ರೀ ಸತ್ಯಸಂಧತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರು ಹಾಗೂ ಅವರ ಪೂರ್ವಾಶ್ರಮದ ಅನುಜರೂ ಆಗಿದ್ದವರು ಕೇವಲ ಮೂರು ವರ್ಷಗಳ ಕಾಲ ಪೀಠದಲ್ಲಿದ್ದರೂ ಅವಿಸ್ಮರಣೀಯ ಕಾರ್ಯಗಳನ್ನೆಸಗಿದ್ದರು. ತಮ್ಮ ವಿದ್ವತ್ಪೂರ್ಣ ವಾಗ್ವೈಖರಿಯಿಂದ ವಾದಿಗಳ ಸದ್ದಡಗಿಸಿ ದ್ವೈತ ದುಂದುಭಿಯನ್ನು ದೇಶದಾದ್ಯಂತ ಮೊಳಗಿಸಿದ್ದರು. ಅಸಾಧಾರಣ ಗುರುಭಕ್ತರಾಗಿದ್ದ ಶ್ರೀಪಾದಂಗಳವರು ತಮ್ಮ ವಿದ್ಯಾ ಗುರುಗಳೂ, ಪರಮ ಗುರುಗಳೂ ಆಗಿದ ಶ್ರೀ ಸತ್ಯಬೋಧತೀರ್ಥ ಶ್ರೀಗಳವರ ವೃಂದಾವನವಿರುವ ಸವಣೂರಿನಲ್ಲಿ ಇಪ್ಪತ್ನಾಲ್ಕು ಲಕ್ಷ ಪ್ರಣವ ಮಂತ್ರ ಜಪಿಸಿ ಗುರ್ವಂತರ್ಯಾಮಿ ಮೂಲ ರಾಮನಿಗೆ ಸಮರ್ಪಿಸಿದ ಪುಣ್ಯ ಪುರುಷರು ಅನೇಕ ಬಾರಿ ಮೂಲರಾಮ ಸೀತಾದೇವಿಯರು ಹಾಗೂ ದಿಗ್ವಿಜಯರಾಮ ಮತ್ತು ವೇದವ್ಯಾಸ ದೇವರಿಗೆ ಕೋಟಿ ತುಲಸಿ ಅರ್ಚನೆ ಹಾಗೂ ಕೋಟಿ ಪುಷ್ಪಾರ್ಚನೆಯನ್ನು ನೆರವೇರಿಸಿದ ಮಹಾನುಭಾವರು ಇವರು. ಸಮಕಾಲೀನರಾದ ''ಜಗನ್ನಾಥದಾಸರು'' ''ಗುರು ಸತ್ಯವರರೆಂಬ ಕಲ್ಪಭೂಜಾ, ಧರೆಯೊಳಗೆಮ್ಮನುದ್ಧರಿಸಬಂತಿದಕೊ'' ಎಂಬ ಕೀರ್ತನೆಯಲ್ಲಿ ಬಹಳ ಸುಂದರವಾಗಿ ಸ್ತೋತ್ರ ಮಾಡಿದ್ದಾರೆ. ಇವರ ವೃಂದಾವನವು ಈಗಿನ ಆಂಧ್ರಪ್ರದೇಶಕ್ಕೆ ಸೇರಿದ ಹಿಂದೂಪುರ ತಾಲೂಕಿನ ಸಂತೆ ಬಿದನೂರಿನಲ್ಲಿದೆ.

ಇವರಿಂದ ಸನ್ಯಾಸ ದೀಕ್ಷೆಯನ್ನು ಬಯಸಿದ ಅಡವಿ ಆಚಾರ್ಯರು ಶ್ರೀಪಾದಂಗಳವರು ವಾಸ್ತವ್ಯ ಮಾಡಿದ್ದ ''ನಾಮಗೊಂಡಲು'' ಎಂಬ ಗ್ರಾಮಕ್ಕೆ ಆಗಮಿಸಿ ಶ್ರೀಗಳವರನ್ನು ದರ್ಶನ ಮಾಡಿ ತಮ್ಮ ಅಪೇಕ್ಷೆಯನ್ನು ಭಿನ್ನವಿಸಿದರು. ಶ್ರೀ ಸತ್ಯವರರಿಗೆ ಅಡವಿ ಆಚಾರ್ಯರ ಬಗೆಗೆ ಚೆನ್ನಾಗಿ ತಿಳಿದಿತ್ತು. ವಿದ್ಯೆ-ವಿನಯ

ಮುಂತಾದ ಗುಣ ಸಂಪನ್ನರೂ ಶ್ರೀಮಠದ ಶಿಷ್ಯರೂ ಆಗಿದ್ದ ಆಚಾರ್ಯರು ಸನ್ಯಾಸಕ್ಕೆ ಯೋಗ್ಯರಾಗಿದ್ದರು. ಸನ್ಯಾಸಕ್ಕೆ ಇರಬೇಕಾದ ಮುಖ್ಯವಾದ ಅರ್ಹತೆ, ವೈರಾಗ್ಯ ಅದನ್ನು ಅತ್ಯುನ್ನತ ಮಟ್ಟದಲ್ಲಿ ಹೊಂದಿದ ಅಡವಿ ಆಚಾರ್ಯರು ಸನ್ಯಾಸಕ್ಕಾಗಿ ಪ್ರಾರ್ಥಿಸಲು ಶ್ರೀಗಳವರು ಸನ್ಯಾಸಕ್ಕೆ ದೀಕ್ಷೆ ನೀಡಲು ಸಂತೋಷದಿಂದ ಸಮ್ಮತಿಸಿದರು.

## ವಿಷ್ಣುತೀರ್ಥರಾದ ಜಯತೀರ್ಥಾಚಾರ್ಯರು

ಜಯತೀರ್ಥಾಚಾರ್ಯರಿಂದ ಸನ್ಯಾಸ ನೀಡಲು ಪ್ರಾರ್ಥಿತರಾದ ಶ್ರೀ 1008 ಶ್ರೀ ಸತ್ಯವರತೀರ್ಥರು ನಾಮಗೊಂಡಲು ಗ್ರಾಮದಲ್ಲಿ ಸನ್ಯಾಸ ಸ್ವೀಕಾರದ ಎಲ್ಲ ಪೂರ್ವ ವಿಧಿ ವಿಧಾನಗಳನ್ನು ಪೂರೈಸಿಕೊಂಡು ಬಂದು ನಮಸ್ಕರಿಸಿ, ದೀಕ್ಷೆ ನೀಡಲು ಪ್ರಾರ್ಥಿಸಿದ ಜಯತೀರ್ಥಾಚಾರ್ಯರಿಗೆ ಸನ್ಯಾಸ ದೀಕ್ಷೆ ನೀಡಿ 'ವಿಷ್ಣುತೀರ್ಥ' ಎಂದು ಹೆಸರಿಸಿದರು. ಅಣು-ರೇಣು, ತೃಣ-ಕಾಷ್ಠ ಪರಿಪೂರ್ಣನಾದ ಭಗವಂತನನ್ನು 'ತತ್ರ ತತ್ರ ಸ್ಥಿತೋ ವಿಷ್ಣುಃ ತತ್ರಚ್ಛಕ್ತಿ ಪ್ರಬೋಧಕಃ' ಎಂಬಂತೆ ಸರ್ವತ್ರ ವ್ಯಾಪ್ತನಾಗಿ ಸರ್ವಪ್ರೇರಕನಾದ ವಿಷ್ಣುವನ್ನು ಸರ್ವದಾ ಚಿಂತಿಸುತ್ತ ಸರ್ವ ನಿಯಾಮಕನಾದ ವಿಷ್ಣುವನ್ನು ತಮ್ಮ ದೇಹದಲ್ಲೂ ಬೇರೆಲ್ಲ ಪದಾರ್ಥಗಳಲ್ಲೂ, ನಿರಂತರ ಧ್ಯಾನಿಸುತ್ತ ಜೀವನವನ್ನೇ ವಿಷ್ಣುಮಯವನ್ನಾಗಿಸಿ ಕೊಂಡಿದ್ದ ಆಚಾರ್ಯರಿಗೆ ವಿಷ್ಣುತೀರ್ಥರು ಎಂಬ ಹೆಸರು ಬಹಳ ಔಚಿತ್ಯ ಪೂರ್ಣವಾಗಿತ್ತು. ಯಾವಾಗಲೂ ನಿರ್ಜನ ದೇಶಗಳಲ್ಲೇ ವಾಸಮಾಡುತ್ತ ಏಕಾಂತ ಸ್ಥಾನಗಳಲ್ಲೇ ಸಾಧನೆ ಮಾಡಿ, ಜನಸಮ್ಮರ್ದದಿಂದ ದೂರವಿರಲು ಬಯಸುತ್ತಿದ್ದ ವಿಷ್ಣುತೀರ್ಥರು ಭೋಜನಾದಿಗಳ ನಂತರ ಗುರುಗಳ ಆಜ್ಞೆ ಪಡೆದು ಗುರುಗಳು ಅನುಗ್ರಹಿಸಿ ಕೊಟ್ಟ ಅರ್ಚಾ ಪ್ರತಿಮಗಳನ್ನು ಪಡೆದುಕೊಂಡರು. ಗುರುಗಳು ಅನುಗ್ರಹ ಪೂರ್ವಕ ನೀಡಿದ ಮಂತ್ರಾಕ್ಷತೆಯನ್ನು ಸ್ವೀಕರಿಸಿ ಮತ್ತೆ ಅಡವಿಯತ್ತ ನಡೆದರು ವಿಷ್ಣುತೀರ್ಥರು.

ವಿಷ್ಣುತೀರ್ಥರಿಗೆ ಆಶ್ರಮವಾಗಿದ್ದು ಬಹುಶಃ 1796ರಲ್ಲಿ ''ಜಯತೀರ್ಥ ಗುರೋರಾಜ್ಞಾಕರಃ ಸತ್ಯವರಾಹ್ವಯಃ । ಯತಿ ಶ್ರೇಷ್ಠಃ ಕಿಲ ಗುರುರೇನಂ ತುರ್ಯಾಶ್ರಮಂ ದದೌ (ವಿಷ್ಣುತೀರ್ಥ ವಿಜಯ) (ತಿರುಮಲೇಶ ವಿಠಲಾಂಕಿತ ಜಯಸಿಂಹ ಅವರು ತಮ್ಮ ವಿಷ್ಣುತೀರ್ಥ ದರ್ಶನದಲ್ಲಿ ವಿಷ್ಣುತೀರ್ಥರಿಗೆ ಆಶ್ರಮವಾದದ್ದು ಕ್ರಿ.ಶ. 1786 ಎಂದು ಅಭಿಪ್ರಾಯ ಪಡುತ್ತಾರೆ. ಆಗಿನ್ನು ಆಚಾರ್ಯರಿಗೆ 30ರ ಹರೆಯ. ಅಲ್ಲದೇ ಪೂರ್ವೋಕ್ತ ಚರಿತ್ರೆಯ ಯಾವ ಘಟನೆಗಳು ಈ ದಿನಾಂಕಕ್ಕೆ ಹೊಂದಾಣಿಕೆಯಾಗುವುದಿಲ್ಲ).

# ಅಪೂರ್ವ ತಪಸ್ಸಿದ್ಧಿ

ಅವಧೂತ ವೃತ್ತಿಯನ್ನವಲಂಬಿಸಿ, ಕೇವಲ ಮಧುಕರೀ ವೃತ್ತಿಯಿಂದ ದೇಹ ಪೋಷಣೆಗೈಯುತ್ತ ಗುರುಗಳ ಆಜ್ಞಾನುಸಾರವಾಗಿ ನಿರಂತರ ಶಾಸ್ತ್ರಾಧ್ಯಯನ ಪಾಠ ಪ್ರವಚನಗಳನ್ನು ನೆರವೇರಿಸುತ್ತ ಈಷಣತ್ರಯ ರಹಿತರಾಗಿ ಸಾಧಕ ಶಿರೋಮಣಿಗಳಾಗಿದ್ದ ಶ್ರೀವಿಷ್ಣುತೀರ್ಥರಿಗೆ ಯತ್ಯಾಶ್ರಮವಾದದ್ದು, ಪುಟಕ್ಕಿಟ್ಟ ಬಂಗಾರದಂತೆ ಅವರ ತೇಜಸ್ಸು ಮತ್ತಷ್ಟು ಬೆಳಗಲು ಕಾರಣವಾಯಿತು. ಕೇವಲ ಜ್ಞಾನೋಪದೇಶ, ಸಜ್ಜನರ ಉದ್ಧಾರವೇ ಬದುಕಿನ ಪರಮ ಉದ್ದೇಶವೆಂದು ಭಾವಿಸಿದ್ದ ವಿಷ್ಣುತೀರ್ಥರು ಆ ಉದ್ದೇಶವನ್ನು ಸಾಧಿಸಲು ಜನನಿಬಿಡವಾದ ಸ್ಥಳಗಳನ್ನು ತೊರೆದು ನಿರ್ಜನ ಪ್ರದೇಶಗಳನ್ನೇ ಆಶ್ರಯಿಸಿದರು. ತಮ್ಮ ಶಿಷ್ಯರೊಂದಿಗೆ ನಿರ್ಜನ ಪ್ರದೇಶಗಳಲ್ಲಿ ವಾಸಮಾಡುತ್ತ , ನಿರಂತರ ಪ್ರವಚನ ಹಾಗೂ ಅನುಷ್ಠಾನ ಪರರಾಗಿ ಹೊತ್ತು ಹೊತ್ತಿಗೆ ಸಮಿಪದ ಗ್ರಾಮಗಳ ಸದ್ಗ್ರಹಸ್ಥರಿಂದ ಭಿಕ್ಷಾ ಸ್ವೀಕಾರ ಮಾಡುತ್ತ ಸಂಚಾರ ಮುಂದುವರೆಸಿದ ವಿಷ್ಣುತೀರ್ಥರು ತಮ್ಮ ಪೂರ್ವ ಜನ್ಮದ ಶಿಷ್ಯರು ಇದ್ದರು ಎಂಬ ಹೇಳಲ್ಪಟ್ಟ 'ಕಿನ್ನರಪುರ'ವಾದ 'ಕಿನ್ನಾಳಿಗೆ' ಮತ್ತೊಮ್ಮೆ ಆಗಮಿಸಿದರು. ಈ ಹಿಂದೆ ಅವರು ಅವಧೂತ ಚರ್ಯೆಯಿಂದ ಬಂದಿದ್ದಾಗ ಅವರನ್ನು ನೋಡಿ ಅವರ ಉಪದೇಶಾಮೃತವನ್ನು ಸವಿದು ಆನಂದಿಸಿದ್ದ ಕಿನ್ನಾಳದ ಜನತೆ ಈಗ ಸುಖತೀರ್ಥರ ಶಾಸ್ತ್ರವನ್ನು ಉಪದೇಶ ಮಾಡಲು ವಿಷ್ಣುತೀರ್ಥರಾಗಿ ಬಂದಿರುವ ಇವರನ್ನು ಅತ್ಯಂತ ಭಕ್ತಿಯಿಂದ ಸ್ವಾಗತಿಸಿದರು. ಕಿನ್ನಾಳಿನ ದೇಸಾಯರು ಅವರ ವಸತಿ ಮುಂತಾದ ವ್ಯವಸ್ಥೆಯನ್ನು ಮಾಡಿಕೊಟ್ಟು ಭಕ್ತಿಯಿಂದ ತಮ್ಮ ಮನೆಯಲ್ಲಿ ಭಿಕ್ಷೆ ಸ್ವೀಕರಿಸಬೇಕೆಂದು ಆಮಂತ್ರಣ ನೀಡಿದರು. ಶ್ರೀ ಹರಿಯ ಇಚ್ಛೆಯನ್ನು ಅರಿತ ವಿಷ್ಣುತೀರ್ಥರು ಮುಗುಳ್ನಗುತ್ತ ಸಮ್ಮತಿಸಿದರು.

ಮಾರನೆಯ ದಿವಸ ದೇಸಾಯರ ಮನೆಯಲ್ಲಿ ಭಿಕ್ಷೆಗಾಗಿ ವಿಷ್ಣುತೀರ್ಥರು ಆಗಮಿಸಿದರು. ವೈಭವದಿಂದ ತಮ್ಮ ಉಪಾಸ್ಯ ಮೂರ್ತಿಯಾದ ರುಕ್ಮಿಣಿ-ಸತ್ಯಭಾಮಾ ಸಮೇತ ಗೋಪಾಲ ಕೃಷ್ಣನ ಪೂಜೆ ನೆರವೇರಿಸಿದರು. ಪೂಜಾ ನಂತರ ಭಿಕ್ಷೆಯನ್ನು ಸ್ವೀಕರಿಸುವ ಸಂದರ್ಭದಲ್ಲಿ ದೇಸಾಯರನ್ನು ತಮ್ಮ ಜೊತೆಯಲ್ಲಿಯೇ ಕುಳಿತುಕೊಂಡು ಭೋಜನ ಸ್ವೀಕರಿಸಲು ಹೇಳಿದರು. ಅದಕ್ಕೆ ದೇಸಾಯರು ತಮ್ಮ ಭಿಕ್ಷಾ ಸ್ವೀಕಾರ ಮೊದಲಾಗಲಿ ನಾನು ಆಮೇಲೆ ಕುಳಿತುಕೊಳ್ಳುತ್ತೇನೆ ಎಂದು ಪ್ರಾರ್ಥಿಸಿಕೊಂಡರು ಆದರೆ ವಿಷ್ಣುತೀರ್ಥರು ಸಮ್ಮತಿಸದೇ ಬಲವಂತ ಮಾಡಿ ತಮ್ಮ ಎದುರಿಗೆ ಕೂಡಿಸಿಕೊಂಡು ಭಿಕ್ಷೆ ಸ್ವೀಕರಿಸಲು ಕುಳಿತರು.

ಕಿನ್ನಾಳಿನ ದೇಸಾಯರಿಗೆ ಒಂದು ವಿಚಿತ್ರ ಪ್ರಾರಬ್ಧವು ಬಾಧಿಸುತ್ತಿತ್ತು. ದೇಸಾಯರು ಜೀವನ ಪೂರ್ತಿ ತೃಪ್ತಿಯಿಂದ ಭೋಜನವನ್ನೇ ಮಾಡಿರಲಿಲ್ಲ. ಎಲೆಯ ಮುಂದೆ ಕುಳಿತ ತಕ್ಷಣ ಎಲೆಯಲ್ಲಿ ಬಡಿಸಿದ ಅನ್ನವೆಲ್ಲ ಕ್ರಿಮಿಗಳ ರಾಶಿಯಂತೆ ಭಾಸವಾಗುತ್ತಿತ್ತು. ಎಲೆಯಲ್ಲಿ ಹುಳುಗಳ ದರ್ಶನವಾದ ಮೇಲೆ ಭೋಜನ ಹೇಗೆ ಸೇರಲು ಸಾಧ್ಯ? ದೇಸಾಯರಿಗೆ ಭೋಜನವೇ ಒಂದು ಶಿಕ್ಷೆಯಾಗಿತ್ತು. ಜನ್ಮಾಂತರದ ಪ್ರಬಲ ಪ್ರಾರಬ್ಧವು ಅವರನ್ನು ಹೀಗೆ ಬಾಧಿಸುತ್ತಿತ್ತು. ಯಾವ ಚಿಕಿತ್ಸೆಯಿಂದಲೂ ಗುಣಕಾಣದ ಇಂತಹ ವಿಚಿತ್ರ ವ್ಯಾಧಿಯಿಂದ ಬಳಲುತ್ತಿದ್ದ ದೇಸಾಯರು ಮನದಲ್ಲಿಯೇ ಪರಿತಪಿಸುತ್ತ ಕಾಲ ಕಳೆಯುತ್ತಿದ್ದರು.

ಇದೀಗ ದೇಸಾಯರ ಪ್ರಾರಬ್ಧ ಫಲವಾದ ವಿಚಿತ್ರವಾದ ವ್ಯಾಧಿಯ ನಿವಾರಣೆಯಾಗುವ ಕಾಲ ಕೂಡಿ ಬಂದಿತ್ತು. ಅದನ್ನು ತಿಳಿದ ಜ್ಞಾನಿವರೇಣ್ಯರಾದ ವಿಷ್ಣುತೀರ್ಥರು ದೇಸಾಯರನ್ನು ತಮ್ಮ ಜೊತೆಗೆ ಭೋಜನಕ್ಕೆ ಕುಳಿತುಕೊಳ್ಳಲು ಆಜ್ಞಾಪಿಸಿದ್ದರು. ಶ್ರೀಗಳವರಿಂದ ತೀರ್ಥವನ್ನು ಸ್ವೀಕರಿಸಿ ದೇಸಾಯರು ಎಲೆಯ ಮೇಲೆ ಕುಳಿತುಕೊಂಡರು. ವಿಷ್ಣುತೀರ್ಥರು ತಾವು ಭಿಕ್ಷೆ ಸ್ವೀಕರಿಸುವುದಕ್ಕಿಂತ ಮೊದಲು ತಮ್ಮ ಎಲೆಯಲ್ಲಿ ಬಡಿಸಿದ್ದ ಒಂದು ಹಿಡಿ ಅನ್ನವನ್ನು ಕೈಯಲ್ಲಿ ಹಿಡಿದು ಭಗವಂತನನ್ನು ಸ್ಮರಿಸಿ, ಅನ್ನವನ್ನು ಅಭಿಮಂತ್ರಿಸಿ ದೇಸಾಯರ ಎಲೆಯಲ್ಲಿ ಹಾಕಿ ಭೋಜನ ಸ್ವೀಕರಿಸಲು ತಿಳಿಸಿದರು. ದೇಸಾಯರಿಗೆ ತಮ್ಮ ಕಣ್ಣುಗಳನ್ನೇ ನಂಬಲಾಗಲಿಲ್ಲ. ಜನ್ಮಾರಬ್ಧ ಅವರನ್ನು ಕಾಡುತ್ತಿದ್ದ ವಿಚಿತ್ರ ವ್ಯಾಧಿ ದೂರವಾಗಿತ್ತು. ಹುಳುಗಳು ಕಾಣುತ್ತಿದ್ದ ಎಲೆಯಲ್ಲಿ ನಯನಾನಂದಕರವಾದ ಅನ್ನವೇ ತೋರಿತ್ತು. ಜೀವನದಲ್ಲಿ ಮೊತ್ತ ಮೊದಲ ಬಾರಿಗೆ ದೇಸಾಯರು ಹೊಟ್ಟೆತುಂಬ ಊಟ ಮಾಡಿದ್ದರು.

ಹುಟ್ಟು ಕುರುಡನಿಗೆ ಕಣ್ಣುಗಳು ಬಂದಂತಾಗಿತ್ತು. ಹೆಳವನಿಗೆ ಕಾಲುಗಳು ಬಂದಂತಾಗಿತ್ತು. ಇನ್ನು ಈ ಜನ್ಮದಲ್ಲಿಯೇ ಪರಿಹಾರವಾಗಲಾರದು ಎಂದುಕೊಂಡಿದ್ದ ವ್ಯಾಧಿಯು ಗುಣವಾಗಿತ್ತು, ದೇಸಾಯರ ಆನಂದಕ್ಕೆ ದಾರವೇ ಇರಲಿಲ್ಲ. ವಿಷ್ಣುತೀರ್ಥರ ಕಾಲುಗಳನ್ನು ಹಿಡಿದುಕೊಂಡು ಆನಂದಾಶ್ರುಗಳಿಂದ ಪಾದಗಳನ್ನು ತೋಯಿಸಿದ ದೇಸಾಯರು ತಮ್ಮ ಕೃತಜ್ಞತೆಗಳನ್ನು ಸಲ್ಲಿಸಿದರು.

ಈ ಪ್ರಸಂಗವು ರಾಮಾಯಣದ ಶ್ವೇತ ರಾಜನ ಪ್ರಸಂಗವನ್ನು ನೆನಪಿಸುವಂತಿತ್ತು. ಶ್ವೇತ ರಾಜನು ಅನೇಕ ಯಜ್ಞಗಳನ್ನು ಮಾಡಿದ್ದರೂ ಆದಕ್ಕೆ ತಕ್ಕಂತೆ ಅನ್ನದಾನವನ್ನು ಮಾಡಿರಲಿಲ್ಲ. ಯಜ್ಞ ಮಾಡಿದ ಪುಣ್ಯದಿಂದ ಅವನಿಗೆ ಬ್ರಹ್ಮಲೋಕ

ಪ್ರಾಪ್ತಿಯಾಗಿದ್ದರೂ, ಅಲ್ಲಿ ಅನ್ನ ದೊರಕಿರಲಿಲ್ಲ. ಹಸಿವಿನ ನಿವೃತ್ತಿಗಾಗಿ ಅವನು ತನ್ನ ಶರೀರದ ಮಾಂಸವನ್ನೇ ತಿನ್ನಬೇಕಾಗಿ ಬರುತ್ತಿತ್ತು. ಕೊನೆಗೆ ಬ್ರಹ್ಮದೇವರ ಅಪ್ಪಣೆಯಂತೆ ಅಗಸ್ತ್ಯರ ಮೂಲಕ ಮಾಲೆಯೊಂದನ್ನು ಸಮರ್ಪಿಸಿ ತನ್ನ ಹಸಿವಿನ ಬಾಧೆಯಿಂದ ಮುಕ್ತನಾದ. ಭಗವಂತನಿಗೆ ಮಾಡಿದ ಪುಷ್ಪ ಸಮರ್ಪಣೆಯು ಅನ್ನಪ್ರಾಪ್ತಿಗೆ ಸಾಧನವಾಗುತ್ತದೆ ಎಂಬ ತತ್ವವೂ ಇಲ್ಲಿ ಸೂಚಿತವಾಗಿದೆ.

ಅಗಸ್ತ್ಯರ ಮುಖಾಂತರ ರಾಮದೇವರಿಗೆ ಮಾಲೆಯನ್ನು ಸಮರ್ಪಿಸಿ ಶ್ವೇತರಾಜನು ಹಸಿವಿನ ಬಾಧೆಯಿಂದ ಮುಕ್ತನಾದಂತೆ ವಿಷ್ಣುತೀರ್ಥರ ಮುಖಾಂತರ ಗೋಪಾಲಕೃಷ್ಣನಿಗೆ ಪೂಜೆಯನ್ನು ಸಮರ್ಪಿಸಿ ಕಿನ್ನಾಳಿನ ದೇಸಾಯರು ಹಸಿವಿನ (ವ್ಯಾಧಿಯ) ಬಾಧೆಯಿಂದ ಮುಕ್ತರಾದರು.

ವಿಷ್ಣುತೀರ್ಥರ ಕರುಣೆಯಿಂದ ವ್ಯಾಧಿಯಿಂದ ಮುಕ್ತವಾದ ದೇಸಾಯರು ವಿಷ್ಣುತೀರ್ಥರಿಗೆ ಅಪಾರವಾದ ಸಂಪತ್ತು, ಭೂಮಿ, ಕಾಣಿಕೆಗಳನ್ನು ಸಮರ್ಪಿಸಲು ಮುಂದಾದರು. ವೈರಾಗ್ಯ ಭಾಗ್ಯರಾದ ವಿಷ್ಣುತೀರ್ಥರಿಗೆ ಅಪೇಕ್ಷೆ ಎಲ್ಲಿಯದು ಅವರು ಏನನ್ನೂ ಸ್ವೀಕರಿಸಲು ಬಯಸಲಿಲ್ಲ. ದೇಸಾಯರು ಏನನ್ನಾದರೂ ಸ್ವೀಕರಿಸಿ ಅನುಗ್ರಹಿಸಬೇಕೆಂದು ಮತ್ತೆ ಮತ್ತೆ ಪ್ರಾರ್ಥಿಸಲು ಅವರ ಮೇಲಿನ ಕರುಣೆಯಿಂದ ಒಪ್ಪಿಕೊಂಡರು ಸನಿಹದಲ್ಲಿ ಹರಿಯುತ್ತಿದ್ದ ಕುಶಾನದಿ ತೀರದ ಮೋದೇಶ್ವರ ಪುರವೆಂದು ಹೆಸರಾಗಿದ್ದ ಈಗಿನ ಮಾದಿನೂರಿನಲ್ಲಿ ಸಾಧನೆಗಾಗಿ ಸ್ವಲ್ಪ ಸ್ಥಳವನ್ನು ನೀಡಿದನಲ್ಲದೇ ಅವರ ಪೂಜಾದಿಗಳಿಗೆ ಅಗತ್ಯವಾದ ಒಂದು ಪರ್ಣಶಾಲೆಯನ್ನು ನಿರ್ಮಿಸಿಕೊಟ್ಟನು.

ಮಾದನೂರಿನಲ್ಲಿ ನಿರಂತರವಾಗಿ ವಿಷ್ಣುತೀರ್ಥರು ತಮ್ಮ ಪಾಠ, ಪ್ರವಚನ ವ್ರತವನ್ನು ಹಾಗೂ ತಮ್ಮ ಜಪತಪಾದಿ ಅನುಷ್ಠಾನಗಳನ್ನು ನೆರವೇರಿಸುತ್ತ ವಾಸಿಸಿದರು. ಅನೇಕ ಸಾರಿ ಇಲ್ಲಿ ಶ್ರೀಮನ್ನ್ಯಾಯಸುಧಾ ಮಂಗಲ ಮಹೋತ್ಸವ ನೆರವೇರಿಸಿದರು. ಕಿನ್ನಾಳಿದ ದೇಸಾಯರು ಮತ್ತು ಜನತೆ ಸುತ್ತ ಮುತ್ತಲಿನ ಗೃಹಸ್ಥರು ವಿಷ್ಣುತೀರ್ಥರ ಹಾಗೂ ಅವರ ಅವರ ಶಿಷ್ಯರ ಅಶನ ವಸನಗಳಿಗೆ ಬೇಕಾದ ವ್ಯವಸ್ಥೆಯನ್ನು ಮಾಡುತ್ತಿದ್ದರು. ಯದೃಚ್ಛಾ ಲಾಭ ತುಷ್ಟರಾಗಿ ಸಾಲದೆಂದೆನದೇ ಇಂದು ಬಂದದ್ದನ್ನು ನಾಳೆಗೆಂದಿರಿಸದೇ ಅಸಂಚಯ ವೃತ್ತಿಯಿಂದ ಕಾಲಯಾಪಿದೆ ಮಾಡುತ್ತ ಭಕ್ತರನ್ನು ಉದ್ಧರಿಸುತ್ತಾ ಅಲ್ಲಿಯೇ ಅನೇಕ ದಿನಗಳು ವಾಸವಾಗಿದ್ದರು.

# ಜಗನ್ಮಾತೆಯ ಕೃಪಾ ಪಾತ್ರರು

ಈ ರೀತಿಯಾಗಿ ಅನೇಕ ದಿನಗಳು ನಡೆಯುತ್ತಿರಲು ಕಿನ್ನಾಳು ಹಾಗೂ ಅದರ ಸುತ್ತ ಮುತ್ತಲ ಪ್ರಾಂತಗಳಲ್ಲಿ ಮಳೆ ಇಲ್ಲದೇ ಭೀಕರ ಕ್ಷಾಮ ಉಂಟಾಯಿತು. ನೀರಿನ ಆಶ್ರಯಗಳೆಲ್ಲ ಬತ್ತಿ ಹೋದವು. ತಿನ್ನಲು ಅನ್ನವಿಲ್ಲದೆ ಜನಗಳು ಹಸಿವಿನಿಂದ ಪರಿತಪಿಸಿ ತೊಡಗಿದರು. ಕಿನ್ನಾಳಿನ ದೇಸಾಯರು ತಮ್ಮ ಸಂಗ್ರಹದಲ್ಲಿದ್ದ ದವಸ ಧಾನ್ಯಗಳನ್ನು ಧಾರಾಳವಾಗಿ ವೆಚ್ಚ ಮಾಡಿ ಪ್ರಜೆಗಳನ್ನು ಪೋಷಿಸಿದರು. ಅವರ ಸಂಗ್ರಹವೂ ಬರಿದಾಯಿತು. ಅವರ ಧನ ಮತ್ತು ಧಾನ್ಯ ಸಂಗ್ರಹ ಎರಡೂ ಮುಗಿಯುತ್ತ ಬಂದಾಗ, ವಿಷ್ಣುತೀರ್ಥರ ತಪಸಿದ್ಧಿಯನ್ನು ಚೆನ್ನಾಗಿ ಅರಿತಿದ್ದ ದೇಸಾಯರು ಶ್ರೀಗಳವರಲ್ಲಿ ಪ್ರಾರ್ಥಿಸಲು ಅವರಿಗೆ ಅಭಯ ನೀಡಿದರು. ''ಕ್ಷೇಮಂವಿಧಾಸ್ಯತಿ ಸನೋ ಭಗವಾನ್ ತ್ರ್ಯಧೀಶಃ'' ಎಂಬ ಬ್ರಹ್ಮದೇವರ ಪ್ರಾರ್ಥನೆಯನ್ನು ಸ್ಮರಿಸಿಕೊಂಡು ಎಲ್ಲರ ರಕ್ಷಣೆಯ ಭಾರವನ್ನು ವಹಿಸಿಕೊಂಡರು. ಯಾರ ಕುಡಿಗಣ್ಣಿನ ನೋಟದಿಂದಲೇ ಪ್ರಪಂಚದ ಸೃಷ್ಟಿ, ಸ್ಥಿತಿ, ಪ್ರಲಯ, ಪ್ರವೃತ್ತಿ, ಜ್ಞಾನ, ಅಜ್ಞಾನ, ಬಂಧು ಮೋಕ್ಷಗಳು ನಡೆಯುತ್ತವೋ ಅಂಥ ಪರಬ್ರಹ್ಮನ ರಾಣಿಯಾದ ಪರಬ್ರಹ್ಮಾಣಿಯಾದ ಲಕ್ಷ್ಮೀದೇವಿಯ ಮಹಿಮಾತಿಶಯಗಳನ್ನು ವರ್ಣಿಸುವ ''ರಮಾಸ್ತೋತ್ರವನ್ನು'' ರಚಿಸಿದರು. ಪ್ರತಿನಿತ್ಯವೂ ತಾಮ್ರದ ನಾಣ್ಯವೊಂದನ್ನು ತಮ್ಮ ಅರ್ಚಾಮೂರ್ತಿಯಾದ ರುಕ್ಮಿಣಿ ಸತ್ಯಭಾಮಾ ಸಮೇತ ಗೋಪಾಲಕೃಷ್ಣನ ವಿಗ್ರಹದ ಕೆಳಗಿಟ್ಟು ತಮ್ಮಿಂದ ರಚಿತವಾದ ರಮಾ ಸ್ತೋತ್ರವನ್ನು ಪಠಿಸಲು ತಾಮ್ರದ ನಾಣ್ಯವು ಸುವರ್ಣವಾಗಿ ಪರಿವರ್ತಿತವಾಗುತ್ತಿತ್ತು. ಆ ಧನದಿಂದ ಅನೇಕ ದಿನಗಳವರೆಗೆ ಆಶ್ರಿತರನ್ನು ಸಂರಕ್ಷಿಸಿದರು. ನಂತರ ಲಕ್ಷ್ಮೀದೇವಿಯ ಕೃಪೆಯಿಂದ ಸಮೃದ್ಧವಾಗಿ ಮಳೆ ಬೆಳೆಗಳಾಗಿ ಕ್ಷಾಮ ನಿವಾರಣೆಯಾಯಿತು. ಆ ನಂತರ ವಿಷ್ಣುತೀರ್ಥರು ತಾಮ್ರದ ನಾಣ್ಯವನ್ನು ವಿಗ್ರಹದ ಕೆಳಗೆ ಇಟ್ಟು ಸುವರ್ಣ ಮಾಡುವುದನ್ನು ನಿಲ್ಲಿಸಿದರು. ನಿಲ್ಲಿಸಿದ್ದೇಕೆಂದು ಶಿಷ್ಯರು ಪ್ರಶ್ನಿಸಲು, ಅನಿವಾರ್ಯವಲ್ಲದ ಸಂದರ್ಭಗಳಲ್ಲದೇ ಸಂಪಾದಿಸಿದ ಪುಣ್ಯವನ್ನು ದೇಹ ಪೋಷಣೆಯಂಥ ಕ್ಷುದ್ರ ಕಾರ್ಯಗಳಿಗಾಗಿ ಬಳಸಬಾರದು ಎಂದು ತಿಳಿಸಿ ಹೇಳಿ ಮೊದಲಿನಂತೆ ಭಿಕ್ಷಾ ವೃತ್ತಿಯನ್ನು ಅವಲಂಬಿಸಿದರು. ಪರಮ ವಿರಕ್ತರಾದ ವಿಷ್ಣುತೀರ್ಥರು ವಿಷ್ಣುತೀರ್ಥರಿಂದ ರಚಿತವಾದ ರಮಾಸ್ತೋತ್ರವನ್ನು ಪರಿಶಿಷ್ಟದಲ್ಲಿ ಮುದ್ರಿಸಲಾಗಿದೆ.

